KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಡಿಸೆಂಬರ್ ೧೧, ೨೦೦೮ (ಮಾರ್ಗಶಿರ ೨೦, ಶಕ ವರ್ಷ ೧೯೩೦) | ಸಂಚಿಕೆ ೪೯ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಜಿಲ್ಲಾ ಪೊಲೀಸ್ ಕಛೇರಿ ಕೋಲಾರ ಚಿನ್ನದ ಗಣಿ ಪ್ರದೇಶ

**ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ: ಪಿಎಂಟಿ/02/2007–08, ದಿನಾಂಕ: 5ನೇ ನವೆಂಬರ್ 2008**

**ವಿಷಯ:** ನಿರುಪಯುಕ್ತಗೊಳಿಸಿದ ವಾಹನಗಳನ್ನು ಬಹಿರಂಗ ಹರಾಜು ಮೂಲಕ ಮಾರಾಟ ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರಿ ಪತ್ರದ ಸಂಖ್ಯೆ:ಹೆಚ್‌ಡಿ 17/ಇಎಂವಿ/2008 ದಿನಾಂಕ: 05.06.2008.
2. ಪೊಲೀಸ್ ಪ್ರಧಾನ ಕಛೇರಿಯ ಹಿಂಬರಹ ಸಂಖ್ಯೆ ವಾಸಾ 59/2007–08 ದಿನಾಂಕ 23.06.2008.
3. ಪೊಲೀಸ್ ಪ್ರಧಾನ ಕಛೇರಿಯ ಪತ್ರದ ಸಂಖ್ಯೆ: ವಾಸಾ(1)59/2007–08 ದಿನಾಂಕ: 16.07.2008.

ಈ ಮೂಲಕ ಸಾರ್ವಜನಿಕರಿಗೆ ಮಾಹಿತಿಗಾಗಿ ತಿಳಿಸುವುದೇನೆಂದರೆ, ದಿನಾಂಕ: 05.02.2009 ರಂದು ಬೆಳಿಗ್ಗೆ 11.00 ಗಂಟೆಗೆ ಈ ಕೆಳಕಂಡ ನಿರುಪಯುಕ್ತಗೊಳಿಸಿದ ಪೊಲೀಸ್ ವಾಹನಗಳನ್ನು ಕೆ.ಜಿ.ಎಫ್.ನ ಜಿಲ್ಲಾ ಸಶಸ್ತ್ರ ಮೀಸಲು ಪಡೆ ಕಛೇರಿಯ ಆವರಣದಲ್ಲಿ ಬಹಿರಂಗ ಹರಾಜು ಕಮ್ ಟೆಂಡರ್ ಮೂಲಕ ವಿಲೇವಾರಿ ಮಾಡಲಾಗುವುದು.

| ಕ್ರ. ಸಂ. | ವಾಹನ ಸಂಖ್ಯೆ | ವಾಹನಗಳ ಮಾದರಿ | ತಯಾರಾದ ವರ್ಷ |
|---|---|---|---|
| 01 | ಕೆಎ–08–ಜಿ–06 | ಮಿನಿ ಬಸ್ (ಡೀಸೆಲ್) | 1990 |
| 02 | ಕೆಎ–08–ಜಿ–07 | ಮಿನಿ ಬಸ್ (ಡೀಸೆಲ್) | 1990 |
| 03 | ಸಿಎಜಿ–6255 | M&M ಜೀಫ್ (ಡೀಸೆಲ್) | 1982 |
| 04 | ಕೆಎ–08–ಜಿ–01 | M&M ಜೀಫ್ (ಡೀಸೆಲ್) | 1990 |
| 05 | ಕೆಎ–08–ಜಿ–02 | M&M ಜೀಫ್ (ಡೀಸೆಲ್) | 1990 |
| 06 | ಕೆಎ–08–ಜಿ–03 | M&M ಜೀಫ್ (ಡೀಸೆಲ್) | 1990 |
| 07 | ಕೆಎ–08–ಜಿ–08 | M&M ಜೀಫ್ (ಡೀಸೆಲ್) | 1990 |
| 08 | ಕೆಎ–08–ಜಿ–09 | M&M ಜೀಫ್ (ಡೀಸೆಲ್) | 1990 |

| ಕ್ರ. ಸಂ. | ವಾಹನ ಸಂಖ್ಯೆ | ವಾಹನಗಳ ಮಾದರಿ | ತಯಾರಾದ ವರ್ಷ |
|---|---|---|---|
| 09 | ಕೆಎ–08–ಜಿ–10 | M&M 540 (ಡೀಸೆಲ್) | 1990 |
| 10 | ಕೆಎ–08–ಜಿ–11 | M&M 540 (ಡೀಸೆಲ್) | 1991 |
| 11 | ಕೆಎ–08–ಜಿ–12 | M&M 540 (ಡೀಸೆಲ್) | 1991 |
| 12 | ಸಿಎಜಿ–6260 | ಮೋಟಾರು ಸೈಕಲ್ (ಪೆಟ್ರೋಲ್) | 1983 |
| 13 | ಸಿಎಜಿ–6261 | ಮೋಟಾರು ಸೈಕಲ್ (ಪೆಟ್ರೋಲ್) | 1983 |
| 14 | ಸಿಎಜಿ–6263 | ಮೋಟಾರು ಸೈಕಲ್ (ಪೆಟ್ರೋಲ್) | 1984 |
| 15 | ಸಿಎಜಿ–6269 | ಮೋಟಾರು ಸೈಕಲ್ (ಪೆಟ್ರೋಲ್) | 1987 |
| 16 | ಕೆಎ–08–ಜಿ–04 | ಮೋಟಾರು ಸೈಕಲ್ (ಪೆಟ್ರೋಲ್) | 1990 |
| 17 | ಕೆಎ–08–ಜಿ–05 | ಮೋಟಾರು ಸೈಕಲ್ (ಪೆಟ್ರೋಲ್) | 1990 |

**ಹರಾಜು ಕಮ್ ಟೆಂಡರ್ ನಿಬಂಧನೆಗಳು**

1. ಮೊಹರು ಮಾಡಿದ (ಸೀಲ್ಡ್ ಟೆಂಡರ್) ಲಕೋಟೆಯನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೆ.ಜಿ.ಎಫ್ ಜಿಲ್ಲೆ ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆ ಮೇಲೆ ನಿಷ್ಪ್ರಯೋಜಕ ಪೊಲೀಸ್ ವಾಹನಗಳನ್ನು ಖರೀದಿಸುವ ಬಗ್ಗೆ ಎಂಬುದನ್ನು ನಮೂದಿಸಬೇಕು. ಪ್ರತಿಯೊಂದು ವಾಹನಕ್ಕೆ ಬೇರೆ ಬೇರೆಯಾಗಿ ಮೊಬಲಗನ್ನು ಟೆಂಡರ್‌ನಲ್ಲಿ ನಮೂದಿಸಬೇಕು.
2. ಪ್ರತಿಯೊಬ್ಬ ಟೆಂಡರ್ ಸವಾಲುದಾರರು ರೂ. 2,000.00 ಗಳಂತೆ ಠೇವಣಿಯನ್ನು ನಗದಾಗಿ ಡಿ.ಡಿ. ಮೂಲಕ ಪೊಲೀಸ್ ಅಧೀಕ್ಷಕರು, ಕೆ.ಜಿ.ಎಫ್ ಇವರ ಹೆಸರಿನಲ್ಲಿ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ಠೇವಣಿ ಹಣಕ್ಕೆ ಯಾವುದೇ ಬಡ್ಡಿಯನ್ನು ಕೊಡಲಾಗುವುದಿಲ್ಲ. ಠೇವಣಿ ಸಲ್ಲಿಸದೆ ಕಳುಹಿಸಲಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
3. ಟೆಂಡರ್ ಫಾರಂನಲ್ಲಿ ಅತಿ ಹೆಚ್ಚಿನ ದರವನ್ನು ಅಂಕಿ ಮತ್ತು ಅಕ್ಷರಗಳಲ್ಲಿ ಬರೆದಿರಬೇಕು. ಟೆಂಡರ್ ಫಾರಂನಲ್ಲಿ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿ ಮಾಡಿದರೆ ಆ ಸ್ಥಳದಲ್ಲಿ ಪೂರ್ಣ ಸಹಿ ಮಾಡಬೇಕು.
4. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
5. ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು 02.01.2009 ರಂದು ಸಂಜೆ 5.00 ಗಂಟೆ ಒಳಗಾಗಿ ಈ ಕಛೇರಿಗೆ ಕಳುಹಿಸತಕ್ಕದ್ದು. ನಂತರ ಬಂದ ಟೆಂಡರ್ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲ.
6. ಟೆಂಡರ್ ಸಹಾ ಬಹಿರಂಗ ಹರಾಜಿನಲ್ಲಿ ಹೆಚ್ಚಿನ ಠೇವಣಿ ಹಣವಿಲ್ಲದೆ ಭಾಗವಹಿಸುವುದು.
7. ಸವಾಲುದಾರರು ಠೇವಣಿ ಹಣವನ್ನು (ರೂ. 2,000.00ಗಳನ್ನು) 05.02.2009ರ ಬೆಳಿಗ್ಗೆ 10.00 ಗಂಟೆಯೊಳಗೆ ಪಾವತಿಸತಕ್ಕದ್ದು. ಹರಾಜು/ಟೆಂಡರ್ ಪ್ರಾರಂಭವಾದ ನಂತರ ಸವಾಲುದಾರರಿಂದ ಠೇವಣಿ ಹಣವನ್ನು ಪಡೆಯಲಾಗುವುದಿಲ್ಲ. ಹಾಗೂ ಠೇವಣಿ ಹಣಕ್ಕೆ ಯಾವುದೇ ಬಡ್ಡಿಯನ್ನು ನೀಡುವುದಿಲ್ಲ.
8. ಪೊಲೀಸ್ ಅಧೀಕ್ಷಕರು, ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜು ಕಮ್ ಟೆಂಡರ್ ಅನ್ನು ನಡೆಸುವರು. ಠೇವಣಿಯನ್ನು ತುಂಬಿದ ಟೆಂಡರ್‌ದಾರರು/ಸವಾಲುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
9. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆಯನ್ನು ದಾಖಲುಗೊಳಿಸಿದ ನಂತರ ದೃಢೀಕೃತವಾದ ಟೆಂಡರ್‌ಗಳನ್ನು ಪೊಲೀಸ್ ಅಧೀಕ್ಷಕರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಾಗಲೀ ಸಾರ್ವಜನಿಕರ ಸಮಕ್ಷಮ ತೆರೆದು ಬಹಿರಂಗಪಡಿಸುವುದು. ಈ ಎರಡರಲ್ಲಿ ಅತಿ ಹೆಚ್ಚಿನ ದರವನ್ನು ಯಾರು ನಮೂದಿಸಿರುವವರೋ ಅವರನ್ನು ಯಶಸ್ವಿ ಟೆಂಡರ್‌ದಾರ/ಹರಾಜುದಾರರು ಎಂದು ಪರಿಗಣಿಸಲಾಗುವುದು.
10. ಯಶಸ್ವಿಯಾದ ಟೆಂಡರ್‌ದಾರರು/ಸವಾಲುದಾರರು ವಾಹನದ ಒಟ್ಟು ಬೆಲೆಯ ಶೇಕಡ 25 ರಷ್ಟು ಹಣವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ತುಂಬಬೇಕು. ಉಳಿದ ಹಣವನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಒಪ್ಪಿದ ನಂತರವೇ ಬಾಕಿ ಹಣವನ್ನು ಸಂಪೂರ್ಣವಾಗಿ ಪಾವತಿ ಮಾಡಿ ಹರಾಜು ಮಾಡಲಾದ ವಾಹನವನ್ನು ಏಳು (7) ದಿನಗಳೊಳಗಾಗಿ ತಮ್ಮ ಸ್ವಂತ ವೆಚ್ಚದಿಂದ ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಅವರು ತುಂಬಿದ ಶೇಕಡ 25

ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು. ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆಯನ್ನು ಹೊರಡಿಸಿ ಸದರಿ ವಾಹನವನ್ನು ಮರು ಹರಾಜು ಮಾಡಲಾಗುವುದು.

11. ನಿರುಪಯುಕ್ತ ವಾಹನಕ್ಕೆ ಚಾಲ್ತಿಯಲ್ಲಿರುವ ಕರ್ನಾಟಕ ಸುಮೌಲ್ಯ ತೆರಿಗೆ ಕಾಯ್ದೆ 2003ರ ರೀತ್ಯಾ ಶೇಕಡಾ 12.5 ತೆರಿಗೆ ವಿಧಿಸಲಾಗುವುದು.
12. ಎಲ್ಲಾ ಹಣವನ್ನು ಪೊಲೀಸ್ ಅಧೀಕ್ಷಕರು, ಕೆ.ಜಿ.ಎಫ್. ರವರ ಕಛೇರಿಗೆ ನಗದು ರೂಪದಲ್ಲಿ ತುಂಬಬೇಕು, ಚೆಕ್ಕುಗಳ ಮೂಲಕ ತುಂಬಿದ ಹಣವನ್ನು ಸ್ವೀಕರಿಸಲಾಗುವುದಿಲ್ಲ.
13. ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್/ ಸವಾಲುದಾರರ ಠೇವಣಿ ಹಣವನ್ನು ಕೂಡಲೇ ಹಿಂತಿರುಗಿಸಲಾಗುವುದು.
14. ಸರ್ಕಾರಿ ವಾಹನದ ಹರಾಜಿನಲ್ಲಿ ಭಾಗವಹಿಸಿದ ಸವಾಲುದಾರರು ಸರ್ಕಾರಿ ನಿಯಮಗಳನ್ನು ಪಾಲಿಸಬೇಕು.
15. ಮೋಟಾರು ವಾಹನ ತೆರಿಗೆಯನ್ನು ಚಾಲ್ತಿಯಲ್ಲಿರುವ ದರ ನಿಯಮಗಳ ಮೇಲೆ ವಸೂಲಿ ಮಾಡಲಾಗುವುದು.
16. ಟೆಂಡರ್/ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಟೆಂಡರ್/ಬಿಡ್‌ದಾರರು ಅವರ ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದ್ದು, ಅಂತಹ ಟೆಂಡರ್‌ದಾರರು/ಬಿಡ್‌ದಾರರು ಮುಂಗಡವಾಗಿ ಕಟ್ಟಲಾದ ಠೇವಣಿ ಹಣದಲ್ಲಿ ವಸೂಲಿ ಮಾಡುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಕೆ.ಜಿ.ಎಫ್. ರವರ ತೀರ್ಮಾನಕ್ಕೆ ಒಳಪಟ್ಟಿರುತ್ತದೆ. ಹಾಗೂ ಅಂತಹ ವಸೂಲಿ ಮಾಡಲು ತೀರ್ಮಾನಿಸಿದ ಹಣವನ್ನು ಸ್ಥಳದಲ್ಲೇ ಮಾಡತಕ್ಕದ್ದು. ತಪ್ಪಿದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ಬದ್ಧವಾಗಿ ಕ್ರಮ ತೆಗೆದುಕೊಳಲಾಗುವುದು.
17. ಹರಾಜಿನಲ್ಲಿ ಯಾವುದೇ ಟೆಂಡರ್/ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಕೆ.ಜಿ.ಎಫ್. ರವರು ಹೊಂದಿರುತ್ತಾರೆ. ಇವರ ನಿರ್ಣಯವೇ ಅಂತಿಮವಾದದ್ದು.
18. ಮೇಲೆ ತಿಳಿಸಿರುವ ಹರಾಜಿನ ದಿಸೆಯಿಂದ ಯಾವುದೇ ವಾದವಿವಾದ ಉದ್ಭವಿಸಿದಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.
19. ಇಚ್ಚೆಯುಳ್ಳ ಟೆಂಡರ್/ಸವಾಲುದಾರರು ಹರಾಜು ಮಾಡಲಿರುವ ನಿಷ್ಪ್ರಯೋಜಕ ವಾಹನಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆ, ಕೆ.ಜಿ.ಎಫ್ ರವರ ವಾಹನ ವಿಭಾಗದ ಕಛೇರಿಯಲ್ಲಿ ಪರಿಶೀಲಿಸಬಹುದು.

ತಮ್ಮ ವಿಶ್ವಾಸಿ,
ಪೊಲೀಸ್ ಅಧೀಕ್ಷಕರು,
ಕೋಲಾರ ಚಿನ್ನದ ಗಣಿ ಪ್ರದೇಶ.

ಪಿ.ಆರ್. 594

## ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಚನ್ನರಾಯಪಟ್ಟಣ

### ಹರಾಜು ಪ್ರಕಟಣೆ

**ಸಂ:ಸಕೃನಿ:ಚ:ಲೆಕ್ಕ–2:ವಾಹನ ಹರಾಜು:2008–09, ದಿನಾಂಕ: 14ನೇ ನವೆಂಬರ್ 2008**

ಹಾಸನ ಜಿಲ್ಲಾ ಪಂಚಾಯತ್, ಹಾಸನರವರ ಪತ್ರದ ಸಂಖ್ಯೆ:ಜಿಪಂಹಾ:ಆಡಳಿತ[1]:ವಾ:03:2005–06/ದಿನಾಂಕ: 15.2.2006 ಮತ್ತು ಜಂಟಿ ಕೃಷಿ ನಿರ್ದೇಶಕರು, ಹಾಸನ ರವರ ಪತ್ರದ ಸಂಖ್ಯೆ:ಜಕೃನಿ:ಹಾ:ಲೆಕ್ಕ–6:ಅವಾವಿ:60:2007–08:ದಿ:17.6.2008ರ ಪ್ರಕಾರ ಈ ಕೆಳಕಂಡ [ಮೂರು] ಜೀಪುಗಳಿಗೆ ವಿಲೇ ಮಾಡಲು ಅನುಮತಿ ನೀಡಿರುತ್ತಾರೆ. ಅನುಪಯುಕ್ತ ಹಳೇ ಜೀಪು ಈ ಕಛೇರಿಯ ಆವರಣದಲ್ಲಿ ಎಲ್ಲಿದೆಯೋ, ಹೇಗಿದೆಯೋ ಹಾಗೇ ದಿನಾಂಕ:31.12.2008 ರಂದು ಮಧ್ಯಾಹ್ನ 3.00 ಗಂಟೆಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಈ ಕೆಳಗೆ ಸಹಿ ಮಾಡಿರುವವರು ಸಾರ್ವಜನಿಕ ಬಹಿರಂಗ ಹರಾಜಿನ ಮೂಲಕ ಹರಾಜು ಮಾಡುತ್ತಾರೆಂದು ಈ ಮೂಲಕ ತಿಳಿಸಲಾಗಿದೆ. ಹರಾಜಿನಲ್ಲಿ ಭಾಗವಹಿಸಲು ಇಷ್ಟಪಡುವ ಸಾರ್ವಜನಿಕರು ವಾಹನವನ್ನು ಈ ಕಛೇರಿಯ ಆವರಣದಲ್ಲಿ ಕಛೇರಿಯ ವೇಳೆಯಲ್ಲಿ ಪರಿಶೀಲಿಸಬಹುದು. ಹರಾಜು ಷರತ್ತು ನಮೂನೆಯನ್ನು ಈ ಕಛೇರಿಯಲ್ಲಿ ಪಡೆದುಕೊಳ್ಳಬಹುದು.

### ಷರತ್ತುಗಳು

ದಿನಾಂಕ:31.12.2008ರಂದು ಈ ಕಛೇರಿಯ ಆವರಣದಲ್ಲಿ ಬಹಿರಂಗ ಹರಾಜು ಮಾಡಲಿರುವ [ವಾಹನ] ಜೀಪಿನ ಮಾರಾಟ ಷರತ್ತುಗಳು.

1] ಎಂ.ವೈ.ಕ್ಯೂ – 937 ಜೀಪು 06–05–1966

2] ಎಂ.ಇ.ಓ – 4660 ಜೀಪು 16–05–1974

3] ಎಂ.ವೈ.ಹೆಚ್. 1397 ಜೀಪು 28–04–1970

1. ಹರಾಜಿನಲ್ಲಿ ಸವಾಲು ಮಾಡುವ ಇಚ್ಛೆಯುಳ್ಳ ಪ್ರತಿಯೊಬ್ಬ ಸವಾಲುದಾರನು ಮುಂಗಡವಾಗುವ ಮೂರು ವಾಹನಗಳಿಗೆ ಇ.ಎಂ.ಡಿ. ಹಣ ರೂ. 6000–00 [ಆರು ಸಾವಿರ] ಗಳನ್ನು ಠೇವಣಿಯಾಗಿ ದಿನಾಂಕ:29.12.2008 ರೊಳಗಾಗಿ ಕಟ್ಟಿ ಹರಾಜಿನಲ್ಲಿ ಭಾಗವಹಿಸಲು ಅರ್ಹತೆ ಪಡೆಯಬೇಕು.
2. ಅಂತಿಮ ಸವಾಲುದಾರನೆಂದು ನಿರ್ಧರಿಸಲಾದ ವ್ಯಕ್ತಿಯು ಜೀಪು ಮಾರಾಟವಾದ ಕೂಡಲೇ ಸವಾಲಿನ ಮೇಲೆ ನಿರ್ಧರಿಸಲಾದ ಹಣದ ಶೇ.50% ಭಾಗ [ಅರ್ಧಭಾಗ] ಇ.ಎಂ.ಡಿ. ಸೇರಿ ಸ್ಥಳದಲ್ಲಿಯೇ ಪಾವತಿಸತಕ್ಕದ್ದು.
3. ಒಂದು ವೇಳೆ ಸವಾಲುದಾರನು ಬಿಡ್ಡಿನ ಅರ್ಧಭಾಗ ಹಣವನ್ನು ಸ್ಥಳದಲ್ಲಿಯೇ ಪಾವತಿಸದಿದ್ದಲ್ಲಿ ಅವರ ಇ.ಎಂ.ಡಿ. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಅಂತಹ ಬಿಡ್ಡುದಾರನಿಗೆ ಹರಾಜಿನಲ್ಲಿ ಭಾಗವಹಿಸುವ ಅಧಿಕಾರವನ್ನು ನೀಡುವುದಿಲ್ಲ. ಅಲ್ಲದೇ ಪುನಃ ಅದೇ ಸ್ಥಳದಲ್ಲಿ ಮರು ಹರಾಜನ್ನು ನಡೆಸಲಾಗುವುದು.
4. ಹರಾಜು ಮುಗಿದ ನಂತರ ಅತಿ ಹೆಚ್ಚು ಬಿಡ್ಡು ಮಾಡಿರುವ ಯಾವುದೇ ಬಿಡ್ಡನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಹಾಸನ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಮಾತ್ರ ಇರುತ್ತದೆ.
5. ಒಂದು ವೇಳೆ ಬಿಡ್ಡನ್ನು ಒಪ್ಪಿಕೊಂಡ ನಂತರ ಬಿಡ್ಡುದಾರನಿಗೆ ತಿಳಿಸಿದ ದಿನಾಂಕದಿಂದ 10 ದಿನದೊಳಗಾಗಿ ಉಳಿದ ಅರ್ಧಭಾಗ ಹಣವನ್ನು ಕಟ್ಟಿ ವಾಹನವನ್ನು ತೆಗೆದುಕೊಂಡು ಹೋಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯ ಒಳಗೆ ಹಣ ಕಟ್ಟದೆ ವಾಹನಗಳನ್ನು ತೆಗೆದುಕೊಳ್ಳದಿದ್ದಲ್ಲಿ ಈಗಾಗಲೇ ಪಾವತಿಸಿರುವ ಅರ್ಧಭಾಗದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
6. ಒಂದು ವೇಳೆ ಬಿಡ್ಡುದಾರನು ಬಿಡ್ಡಿನ ಹಣವನ್ನು ಕಟ್ಟದೆ ವಾಹನಗಳನ್ನು ತೆಗೆದುಕೊಂಡು ಹೋಗದಿದ್ದ ಪಕ್ಷದಲ್ಲಿ ಮರು ಹರಾಜನ್ನು ಮಾಡಲು ಪುನಃ ದಿನಾಂಕವನ್ನು ನಿಗದಿಗೊಳಿಸಿ ಹರಾಜು ಕ್ರಮ ಜರುಗಿಸಲಾಗುವುದು.
7. ಮಾರಾಟವನ್ನು ನಡೆಸುವ ಅಧಿಕಾರಿಗಳು ಸವಾಲನ್ನು ಪುರಸ್ಕರಿಸುವ ಇಲ್ಲದೆ ತಿರಸ್ಕರಿಸುವ ಹಕ್ಕನ್ನು ಹೊಂದಿರುತ್ತಾರೆ.
8. ಮಾರಾಟವು ಸಂದರ್ಭಾನುಸಾರ ಇಲಾಖೆಯ ಅಧಿಕಾರಸ್ಥರಿಂದ ಸ್ಥಿರೀಕರಣಕ್ಕೆ ಒಳಪಟ್ಟಿರುತ್ತದೆ.
9. ಮಾರಾಟ ಸ್ಥಿರಗೊಳಿಸಲ್ಪಟ್ಟ ಮೇಲೆ ಅತಿ ಹೆಚ್ಚು ಬೆಲೆಗೆ ಕೂಗಿದ ಸವಾಲುದಾರನಿಗೆ ಜೀಪುಗಳನ್ನು ಹಾಸನ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಂದ ಅನುಮೋದನೆ ದೊರೆತ ನಂತರ ಜೀಪನ್ನು ಒಪ್ಪಿಸಲಾಗುವುದು. ಅಲ್ಲದೆ ಕರ್ನಾಟಕ ಮಾರಾಟ ತೆರಿಗೆ ನಿಯಮದ ಪ್ರಕಾರ ಅನ್ವಯವಾಗುವ ಎಲ್ಲಾ ತೆರಿಗೆಗಳನ್ನು ಪಾವತಿಸತಕ್ಕದ್ದು.
10. ವಾಹನವು ಎಲ್ಲಿದೆಯೋ ಹೇಗಿದೆಯೋ ಅದೇ ಸ್ಥಿತಿಯಲ್ಲಿ ಜೀಪನ್ನು ಕೊಳ್ಳಲು ಇಚ್ಛೆಯುಳ್ಳವರು ಪ್ರಕಟಣೆಯ ದಿನಾಂಕದಿಂದ ಮಾರಾಟದ ದಿನಾಂಕದವರೆಗೆ ಈ ಕಛೇರಿಯ ಎಲ್ಲಾ ದಿನಗಳಲ್ಲಿ ಬೆಳಿಗ್ಗೆ 10–00 ಗಂಟೆಯಿಂದ ಸಂಜೆ 5.30ರ ಸಮಯದವರೆಗೆ ನೋಡಲು ಅವಕಾಶವಿರುತ್ತದೆ.

ಸಹಾಯಕ ಕೃಷಿ ನಿರ್ದೇಶಕರು

ಪಿ.ಆರ್. 596 ಚನ್ನರಾಯಪಟ್ಟಣ, ಹಾಸನ ಜಿಲ್ಲೆ.

## ಅರಣ್ಯ ಇಲಾಖೆ

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ

## ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ಸಂಖ್ಯೆ: ಎ4/ಹರಾಜು/ಟೆಂಡರ್/ಸಿಆರ್–01/2008–09, ದಿನಾಂಕ: 26ನೇ ನವೆಂಬರ್ 2008**

ಈ ವಿಭಾಗದ ಕಛೇರಿಯಲ್ಲಿ 2008–09 ನೇ ಸಾಲಿನಲ್ಲಿ ನೊಂದಾಯಿತ ಗುತ್ತಿಗೆದಾರರಿಂದ 2008–09ನೇ ಸಾಲಿಗೆ ಈ ಕೆಳಕಂಡ ಕಾಮಗಾರಿಗಳಿಗೆ ಮೊಹರಾದ ಟೆಂಡರನ್ನು ಆಹ್ವಾನಿಸಲಾಗಿದೆ, ಕಾಮಗಾರಿ ನಿರ್ವಹಿಸಿ ಅನುಭವವುಳ್ಳವರಿಗೆ ಪ್ರಾಮುಖ್ಯತೆ ನೀಡಲಾಗುವುದು. ಟೆಂಡರ್ ಫಾರಂಗಳನ್ನು ರೂ. 200/– ಮತ್ತು ಚಾಲ್ತಿಯಲ್ಲಿರುವ ತೆರಿಗೆಗಳನ್ನು ಪಾವತಿಸಿ ಈ ಕಛೇರಿಯಲ್ಲಿ ದಿನಾಂಕ: 12–12–2008 ರಿಂದ 17–12–2008 ರವರೆಗೆ ಬೆಳಗ್ಗೆ 10.00 ಘಂಟೆಯಿಂದ ಮಧ್ಯಾಹ್ನ 1.00 ಘಂಟೆಯವರೆಗೆ ನೀಡಲಾಗುವುದು. ಇಚ್ಛೆಯುಳ್ಳ ಗುತ್ತಿಗೆದಾರರು ಟೆಂಡರನ್ನು ಸಲ್ಲಿಸಬಹುದು. ಭರ್ತಿ ಮಾಡಿದ ಟೆಂಡರ್ ಫಾರಂನ್ನು ದಿನಾಂಕ: 17–12–2008 ರಂದು ಮದ್ಯಾಹ್ನ 3:00 ಗಂಟೆ0ುವರೆಗೆ ಸ್ವೀಕರಿಸಲಾಗುವುದು. ಹೀಗೆ ಸ್ವೀಕರಿಸಿದ ಟೆಂಡರ್‌ಗಳನ್ನು ಅದೇ ದಿನ 3:30 ಗಂಟೆಗೆ ಹಾಜರಿರುವ ಅರಣ್ಯ ಗುತ್ತಿಗೆದಾರರ ಸಮಕ್ಷಮ ಈ ಕೆಳ ಸಹಿ ಮಾಡಿರುವ ಅಧಿಕಾರಿಗಳು ಅಥವಾ ಅವರಿಂದ ಪ್ರಾಧೀಕೃತಗೊಂಡ ಅಧಿಕಾರಿಗಳಿಂದ ತೆರೆದು ಓದಲಾಗುವುದು. ಒಂದು ವೇಳೆ ಟೆಂಡರ್ ದಿನಾಂಕವು ಸಾರ್ವಜನಿಕ ರಜೆ ಎಂದು ಘೋಷಿತವಾದರೆ ಮರುದಿನ ಅದೇ ಸಮ0ುಕ್ಕೆ ತೆರೆ0ುಲಾಗುವುದು.

**ಕಾಮಗಾರಿಗಳು ಈ ಕೆಳಕಂಡಂತಿರುತ್ತವೆ.**

ಲೆಕ್ಕ ಶೀರ್ಷಿಕೆ 2406–02–110–0–47 ರಾಷ್ಟ್ರೀಯ ಉದ್ಯಾನವನ ಅಭಿವೃದ್ಧಿ ಯೋಜನೆ (ಡಿ.ಎನ್.ಪಿ.ಎಸ್) (ಕೇಂದ್ರ) ಅಡಿಯಲ್ಲಿ ನಿರ್ವಹಿಸಬೇಕಾದ ಕಾಮಗಾರಿಗಳ ವಿವರ

| ಕ್ರ. ಸಂ | ಕಾಮಗಾರಿಗಳ ವಿವರ | ಕೆಲಸದ ಸ್ಥಳ ಮತ್ತು ಸಂಖ್ಯೆ | ಕಾಮಗಾರಿ0ಯ ಅಂದಾಜು ಮೊತ್ತ (ರೂಗಳಲ್ಲಿ) | ಕಾಮಗಾರಿ ಪೂರ್ಣಗೊಳಿಸ ಬೇಕಾದ ದಿನಾಂಕ | ಮುಂಗಡ ಠೇವಣಿ ಮೊಬಲಗು (ಇ.ಎಂ.ಡಿ) ರೂಗಳಲ್ಲಿ |
|---|---|---|---|---|---|
| 1. | ಕೌದಳ್ಳಿಯಲ್ಲಿ ವನ್ಯಜೀವಿ ವಲಯದ ಅರಣ್ಯಾಧಿಕಾರಿಯವರ ಕಛೇರಿ ಕಟ್ಟಡ ನಿರ್ಮಿಸಲು | ಕೌದಳ್ಳಿ ವನ್ಯಜೀವಿ ವಲಯ, ಕೌದಳ್ಳಿ | 5,00,000.00 | 28–02–2009 | 20,000.00 |
| 2. | ಸೌರಬೇಲಿ ನಿರ್ಮಾಣದ ಕಾಮಗಾರಿ | ಮ.ಮ ಬೆಟ್ಟ ವನ್ಯಜೀವಿ ವಲಯದ ಇಂಡಿಗನಾಥ ಗ್ರಾಮ (1.5 ಕಿ.ಮೀ) | 3,75,000.00 | 28–02–2009 | 18,750.00 |

**ಷರತ್ತುಗಳು :–**

1. ಟೆಂಡರ್ ಫಾರಂ ಗಳನ್ನು ಪ್ರತಿ ಕಾಮಗಾರಿಗೆ ಪ್ರತ್ಯೇಕವಾಗಿ ರೂ.200.00 ಮತ್ತು ಚಾಲ್ತಿಯಲ್ಲಿರುವ ತೆರಿಗೆಗಳನ್ನು ಪಾವತಿಸಿಕೊಂಡು ಈ ಕಛೇರಿಯಲ್ಲಿ ಬೆಳಿಗ್ಗೆ 10.00 ಘಂಟೆಯಿಂದ ಮಧ್ಯಾಹ್ನ 1.00 ಘಂಟೆಯವರೆಗೆ ನೀಡಲಾಗುವುದು.
2. ದಿನಾಂಕ: 17–12–2008 ರಂದು ಟೆಂಡರ್ 0ಯಶಸ್ವಿ0ಯಾಗದಿದ್ದಲ್ಲಿ ದಿನಾಂಕ: 29–12–2008 ರಂದು ಮರು ಟೆಂಡರನ್ನು ಕರೆ0ಯಲಾಗುವುದು. ಸದರಿ ದಿನದಂದು ಮೇಲೆ ತಿಳಿಸಿದಂತೆ ಟೆಂಡರ್‌ಫಾರಂ ಗಳನ್ನು 11:00 ಗಂಟೆಯಿಂದ ಮಧ್ಯಾಹ್ನ 1:30 ಗಂಟೆ0ಯವರೆಗೆ ನೀಡಿ ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಅದೇ ದಿನ ಮಧ್ಯಾಹ್ನ 3:00 ಗಂಟೆಯವರೆಗೆ ಸ್ವೀಕರಿಸಿ ಅದೇ ದಿನ ಮಧ್ಯಾಹ್ನ 3:30 ಗಂಟೆಗೆ ಟೆಂಡರ್ ತೆರೆದು ಓದಲಾಗುವುದು, ಈ ಬಗ್ಗೆ ಮತ್ತೊಂದು ಮರುಟೆಂಡರ್ ಪ್ರಕಟಣೆ0ಯನ್ನು ಹೊರಡಿಸುವುದಿಲ್ಲ.
3. ಕಾಮಗಾರಿಗೆ ನಿಗಧಿಪಡಿಸಿರುವ ಇ.ಎಮ್.ಡಿ (ಠೇವಣಿ ಹಣ) ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಿಂದ 'ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ' ಇವರ ಹೆಸರಿನಲ್ಲಿ ಡಿ.ಡಿ ರೂಪದಲ್ಲಿ ಪಡೆದು ಟೆಂಡರ್ ಫಾರಂಜೊತೆಗೆ ಲಗತ್ತಿಸಬೇಕು. ಯಾವುದೇ ನಗದು / ಚೆಕ್ ಇತರೆ ಯಾವುದೇ ಹಣದ ರೂಪವನ್ನು ಲಗತ್ತಿಸುವಂತಿಲ್ಲ ಮತ್ತು ಸ್ವೀಕರಿಸುವುದೂ ಇಲ್ಲ.
4. ಮೇಲೆ ತಿಳಿಸಿರುವ ಕೆಲಸವು ಅ0ದಾಜಿನದ್ದಾಗಿದ್ದು ಯಾವುದೇ ಕಾರಣವಿಲ್ಲದೆ ಬದಲಾವಣೆಗೆ ಒಳಪಟ್ಟಿರುತ್ತದೆ ಮತ್ತು ಈ ಬಗ್ಗೆ ಅ0ತಿಮ ತೀರ್ಮಾನ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ ರವರದ್ದಾಗಿರುತ್ತದೆ.
5. ಅರಣ್ಯ ಗುತ್ತಿಗೆದಾರರು ಭರ್ತಿ ಮಾಡಿದ ಟೆಂಡರ್ ಫಾರಂ ಗಳನ್ನು ಪ್ರತಿ ವಲಯಕ್ಕೆ ಸಂಬಂಧಿಸಿದಂತೆ ಮತ್ತು ಪ್ರತಿ ಕಾಮಗಾರಿಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಮೊಹರು ಮಾಡಿದ ಲಕೋಟೆಯಲ್ಲಿ ಪ್ರತ್ಯೇಕವಾದ ಇಎಂಡಿಯೊಂದಿಗೆ ಸಲ್ಲಿಸುವುದು.
6. ಸದರಿ ಕಾಮಗಾರಿಗಳು ಮಳೆ ಆಧಾರಿತ ಹಾಗೂ ಋತುಮಾನದ ಕೆಲಸಗಳಾಗಿರುವುದರಿಂದ. ಒಂದು ಪಕ್ಷ ಯಾವುದಾದರೂ ಕಾಮಗಾರಿಯನ್ನು ಟೆಂಡರ್ ಮುಂಚೆ ಕೈಗೊಂಡಿದ್ದ ಪಕ್ಷದಲ್ಲಿ ಮತ್ತು ಕೆಲವು ಕೆಲಸಗಳನ್ನು ಕೈಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳನ್ನು ಈ ಪ್ರಕಟಣೆಯ ಟೆಂಡರಿನಿಂದ ಹೊರತುಪಡಿಸಿ ಉಳಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಟೆಂಡರ್‌ದಾರರಿಗೆ ಕಾಮಗಾರಿ ಕೈಗೊಳ್ಳಲು ಆದೇಶ ನೀಡಲಾಗುವುದು.
7. ಪ್ರತಿ ಟೆಂಡರ್ ದಾರರು ಈ ಕಾಮಗಾರಿಗಳನ್ನು ನೆರವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವ್ಯವಸ್ಥೆಯನ್ನು ಅವರೇ ಸ್ವಂತವಾಗಿ ಮಾಡಿಕೊಳ್ಳಬೇಕು.
8. ಟೆ0ಡರ್‌ನಲ್ಲಿ ಯಶಸ್ವಿಯಾದ ಗುತ್ತಿಗೆದಾರರಿಗೆ ಕಾಮಗಾರಿಯು ಪೂರ್ಣಗೊಂಡ ನ0ತರ ಸಹಾ0ಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಕಾಮಗಾರಿಗಳನ್ನು ಪರಿಶೀಲಿಸಿ ಅಳತೆ ಮಾಪನ ಮಾಡಿಕೊಂಡ ನಂತರ ಹಾಗು ಹಣದ ಲಭ್ಯತೆಯ ಆಧಾರದ ಮೇಲೆ ಬಿಲ್ಲಿನ ಹಣವನ್ನು ಪಾವತಿಸಲು ಕ್ರಮಕೈಗೊಳ್ಳಲಾಗುವುದು.
9. ಎಲ್ಲಾ ಕೆಲಸಗಳು ಆಗ್ಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ನಿಯಮದಂತೆ ಸಂಬಂಧಿಸಿದ ಅಧಿಕಾರಿಗಳಿಂದ ತನಿಖೆ ಮಾಡಿಸಿ ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಅಳತೆ ಪುಸ್ತಕದೊಂದಿಗೆ (ಎಂ.ಬಿ/ ಎಫ್.ಎನ್.ಬಿ) ಒಪ್ಪಿಸಬೇಕಾಗುತ್ತದೆ ಮತ್ತು ಬಿಲ್ ಸಂದಾಯ ಮಾಡುವಾಗ ಸದರಿ ಬಿಲ್‌ಗಳಲ್ಲಿ ನಿಯಮದಂತೆ ಚಾಲ್ತಿಯಲ್ಲಿರುವ ಆದಾಯ ತೆರಿಗೆ, ಸರ್ ಚಾರ್ಜ್, ವ್ಯಾಟ್ ಮತ್ತು ಭದ್ರತಾ ಠೇವಣಿ ಹಣವನ್ನು

ಕಡಿತಗೊಳಿಸಲಾಗುವುದು ಮತ್ತು ಆಗ್ಗಿಂದಾಗ್ಗೆ ಬದಲಾಗುವ ತೆರಿಗೆಗಳ ವ್ಯತ್ಯಾಸವನ್ನು ಸಹ ನಿಯಮದಂತೆ ಕಡಿತಗೊಳಿಸಲಾಗುವುದು.

10. ಈ ಮೇಲಿನ ಕಾಮಗಾರಿಗಳ ಅನುಷ್ಠಾನ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ವಾರ್ಷಿಕ ಕ್ರಿಯಾ ಯೋಜನೆಯ ಅನುಮೋದನೆ ನಿಭಂಧನೆಗೆ ಒಳಪಟ್ಟಿರುತ್ತದೆ, ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗಳಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.

11. ಕರಾರು ಒಪ್ಪಂದ ಮಾಡಿಕೊಂಡ ಗುತ್ತಿಗೆದಾರರು ಆದೇಶ ಕೊಟ್ಟ ನಿಗಧಿತ ಅವಧಿ0ುೊಳಗೆ ಕಾಮಗಾರಿ0ುನ್ನು ಮುಕ್ತಾ0ುಗೊಳಿಸತಕ್ಕದ್ದು, ತಪ್ಪಿದ್ದಲ್ಲಿ ಬಾಕಿ ಇರುವ ಕಾಮಗಾರಿಗಳ ಬಿಲ್ಲಿನ ಮೊತ್ತದಲ್ಲಿ ಶೇ 5 ರಷ್ಟು ಹಣವನ್ನು ದಂಡವಾಗಿ ಕಡಿತಗೊಳಿಸಲಾಗುವುದು.

12. ಟೆಂಡರ್ ಪ್ರಕಟಣೆ0ು 0ುಾವುದೇ ನಿ0ುಮಗಳನ್ನು ಉಲ್ಲಂಘಿಸಿದಲ್ಲಿ ಮರು ಟೆಂಡರು ಕರೆದು ಕೆಲಸ ಮಾಡಿಸುವ ಮತ್ತು 0ುಾವುದೇ ಕಾರಣ ಕೊಡದೆ ಇಡೀ ಟೆಂಡರನ್ನು ಮುಟ್ಟುಗೋಲು ಹಾಕಿಕೊಳ್ಳುವ ಅವಕಾಶವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ ರವರಿಗೆ ಕಾಯ್ದಿರಿಸಿಕೊಳ್ಳಲಾಗಿದೆ.

13. ನಿ0ುಮದಂತೆ ಹಾಗೂ ತಾಂತ್ರಿಕವಾಗಿ ಕರ್ತವ್ಯ ನಿರ್ವಹಿಸಲು ವಿಫಲವಾದ ವಿಜೇತ ಟೆಂಡರುದಾರರ ಇ.ಎಮ್.ಡಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದರ ಜೊತೆಗೆ ಅವರ ಆರ್ಥಿಕ ಜವಾಬ್ದಾರಿ0ುಲ್ಲಿ ಮರು ಟೆಂಡರು ಕರೆ0ುಲಾಗುವುದು.

14. 0ುಶಸ್ವಿ ಟೆಂಡರುದಾರರ ಆರ್ಥಿಕ ಜವಾಬ್ದಾರಿ0ುಲ್ಲಿ ಟೆಂಡರನ್ನು ಕರೆದು ಕೆಲಸ ಮಾಡಿಸಿದ್ದಕ್ಕಾಗಿ ಇಲಾಖೆಗೆ ಆರ್ಥಿಕ ನಷ್ಟವುಂಟಾದರೆ ಅಂತಹ ನಷ್ಟವನ್ನು ಮೂಲ 0ುಶಸ್ವಿ ಟೆಂಡರುದಾರರು ಕಟ್ಟಿ ಕೊಡಬೇಕಾಗುವುದು.

15. ಈ ಕ್ರಮದಿಂದ ಇಲಾಖೆಗೆ ಆಗಬಹುದಾದ ನಷ್ಟವನ್ನು ಮೂಲ 0ುಶಸ್ವಿ ಟೆಂಡರುದಾರರು ಕಟ್ಟಿಕೊಡಲು ವಿಫಲವಾದರೆ, ಸದರಿ ಮೊತ್ತವನ್ನು ಬಾಕಿ ಕಂದಾ0ು ರೂಪದಲ್ಲಿ ವಸೂಲಿ ಮಾಡಲು ಕ್ರಮ ಕೈಗೊಳ್ಳಲಾಗುವುದು.

16. ಉಪ ಅರಣ್ಯ ಸಂರಕ್ಷಣಾಧಿಕಾರಿ0ುವರ ಆದೇಶದ ಬಗ್ಗೆ ತೃಪ್ತಿಯಿಲ್ಲವಾದರೆ, ಅರಣ್ಯ ಸಂರಕ್ಷಣಾಧಿಕಾರಿಗಳು, ಚಾಮರಾಜನಗರ ವೃತ್ತ, ಚಾಮರಾಜನಗರ ರವರಲ್ಲಿ ಮೇಲ್ಮನವಿ ಸಲ್ಲಿಸಬಹುದು ಹಾಗೂ ಅವರು ಕೊಡುವ ತೀರ್ಪು ಅಂತಿಮವಾದುದು.

17. ಟೆಂಡರನ್ನು ಅಂಗೀಕರಿಸುವ ಅಥವಾ ನಿರಾಕರಿಸುವ ಅಧಿಕಾರವನ್ನು ಈ ಕೆಳ ಸಹಿ ಮಾಡಿರುವವರಿಗೆ ಅಥವಾ ಮೇಲಾಧಿಕಾರಿಗಳಿಗೆ ಕಾಯ್ದಿರಿಸಲಾಗಿದೆ.

18. 0ುಶಸ್ವಿ ಟೆಂಡರುದಾರರು ಕಾಮಗಾರಿಗಳನ್ನು ಕಾಮಗಾರಿ ಸ್ಥಳಕ್ಕೆ ಸಂಬಂಧಿಸಿದ ಅರಣ್ಯಾಧಿಕಾರಿಗಳ ಸಲಹೆ ಹಾಗೂ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸಿ ಅವರುಗಳ ನಿರ್ದೇಶನದಂತೆ ಕಾರ್ಯನಿರ್ವಹಿಸಬೇಕು.

19. ಗುತ್ತಿಗೆದಾರರು ನೇಮಿಸಿಕೊಳ್ಳುವ ಕೆಲಸಗಾರರಿಗೆ ಸರ್ಕಾರದ ನಿಯಮದಂತೆ ಮಜೂರಿ ಮತ್ತಿತರ ಅನುಕೂಲಗಳನ್ನು ಸ್ವತಃ ಗುತ್ತಿಗೆದಾರರೇ ವಹಿಸಬೇಕು. ಇಲಾಖೆಯು ಗುತ್ತಿಗೆದಾರರ ಮತ್ತು ಅವರ ನೌಕರರಿಗೆ ಯಾವುದೇ ಕಷ್ಟ ತೊಂದರೆ ಇತ್ಯಾದಿಗಳಿಗೆ ಜವಾಬ್ದಾರಿಯಾಗುವುದಿಲ್ಲ.

20. ಗುತ್ತಿಗೆದಾರರು ನಿಗಧಿತ ಅವಧಿ0ುಲ್ಲಿ ಕಾಮಗಾರಿ0ುನ್ನು ಪೂರೈಸದಿದ್ದಲ್ಲಿ, ಅರ್ಧಕ್ಕೆ ನಿಲ್ಲಿಸಿದಲ್ಲಿ ಗುತ್ತಿಗೆದಾರರು ಪೂರೈಸಿದ ಕಾಮಗಾರಿ0ು ಹಣ ಪಾವತಿಗೆ ಗುತ್ತಿಗೆದಾರರು ಅರ್ಹರಿರುವುದಿಲ್ಲ ಹಾಗೂ ಕಾನೂನು ರೀತ್ಯ ಮುಂದಿನ ಕೈಗೊಳ್ಳಲಾಗುವುದು.

21. ಕೆಲಸದಲ್ಲಿ ಏನಾದರೂ ಬದಲಾವಣೆ ಅಥವಾ ಮಿತಿಗೊಳಿಸಿದಲ್ಲಿ ಟೆಂಡರುದಾರರು ಕ್ಲೈಮ್ ಮಾಡಬಹುದಾದ 0ುಾವುದೇ ರೀತಿ0ು ಪರಿಹಾರಕ್ಕೆ ಇಲಾಖೆ ಬದ್ಧವಾಗಿರುವುದಿಲ್ಲ.

22. ಕಾಮಗಾರಿಯನ್ನು ಅರಣ್ಯ ಇಲಾಖೆಯಿಂದ ಪರಿಶೀಲಿಸಿ ಮಂಜೂರಾದ ಅಂದಾಜುಪಟ್ಟಿಯ ಅನುಗುಣವಾಗಿ ಮಾಡಬೇಕಾಗಿರುತ್ತದೆ, ಕಾಮಗಾರಿಯ ಗುಣಮಟ್ಟವು ವಲಯ ಅರಣ್ಯಾಧಿಕಾರಿ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಕಾಲಕಾಲಕ್ಕೆ ನೀಡುವ ಲಿಖಿತ/ ಮೌಖಿಕ ಆದೇಶಕ್ಕನುಗುಣವಾಗಿ ಇರತಕ್ಕದ್ದು, ಕೆಲಸಗಳಲ್ಲಿ ಏನಾದರೂ ಪರಿವರ್ತನೆ ಅಥವಾ ಮಾರ್ಪಾಡು ಮಾಡುವುದು ಅವಶ್ಯವೆಂದು ಕಂಡುಬಂದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಲಿಖಿತ ಆದೇಶದ ಮೇರೆಗೆ ಅಂತಹ ಪರಿವರ್ತನೆ ಅಥವಾ ಮಾರ್ಪಾಡುಗಳನ್ನು ಮಂಜೂರಾದ ದರದಲ್ಲಿಯೇ ಮಾಡಲು ಗುತ್ತಿಗೆದಾರರು ಬದ್ದರಾಗಿರಬೇಕಾಗುತ್ತದೆ.

23. ಯಶಸ್ವಿ ಟೆಂಡರ್‌ದಾರರು ಕರಾರು ನಾಮೆಯನ್ನು ಸಹಿ ಮಾಡಿದ ನಂತರ ಟೆಂಡರನ್ನು ಹಿಂತೆಗೆದುಕೊಂಡಲ್ಲಿ ನಿಗಧಿತ ಸಮಯದಲ್ಲಿ ಕಾಮಗಾರಿ ಪ್ರಾರಂಭಿಸದಿದ್ದಲ್ಲಿ, ಕಾಮಗಾರಿಯ ಬಗ್ಗೆ ನಿರಾಸಕ್ತಿ ಹೊಂದಿದ್ದಲ್ಲಿ ಟೆಂಡರ್‌ದಾರರ ಇಎಂಡಿ ಮತ್ತು ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೇ ಗುತ್ತಿಗೆ ಕೆಲಸವನ್ನು ಮೂಲ ಗುತ್ತಿಗೆದಾರರ ಖರ್ಚು ಮತ್ತು ಜವಾಬ್ದಾರಿಯ ಮೇಲೆ ಮರು ಟೆಂಡರ್ ಮಾಡಲಾಗುವುದು, ಟೆಂಡರ್‌ಗೆ ಕಾಲಾವಕಾಶ ಇಲ್ಲದಿದ್ದಲ್ಲಿ ಇಲಾಖೆಯಿಂದ ಕಾಮಗಾರಿಯನ್ನು ಪೂರ್ಣಗೊಳಿಸಿ ಸರ್ಕಾರಕ್ಕೆ ಹಾನಿಯಾದ ಮೊತ್ತವನ್ನು

ಕರ್ನಾಟಕ ಅರಣ್ಯ ಸಂಹಿತೆ 1963 ಕಾಲಂ 109 ಮತ್ತು 119 ರಂತೆ ಭೂಕಂದಾಯ ಬಾಕಿ ವಸೂಲಿಯಂತೆ ವಸೂಲು ಮಾಡಲಾಗುವುದು.

24. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.
25. ಗುತ್ತಿಗೆದಾರರು ವನ್ಯಜೀವಿ ಪ್ರದೇಶದಲ್ಲಿ ಕೆಲಸ ನಿರ್ವಹಿಸಬೇಕಾಗಿರುವುದರಿಂದ, ಈ ಪ್ರದೇಶವು ಸೂಕ್ಷ್ಮ ಮತ್ತು ಅಪಾಯ ಪ್ರದೇಶವಾಗಿದ್ದು, ಈ ಸಂಬಂಧ ಅವಶ್ಯ ಮುಂಜಾಗೃತಿ ಕ್ರಮ ಅನುಸರಿಸಬೇಕಾದ ಬಾದ್ಯತೆ ಗುತ್ತಿಗೆದಾರರ ಮೇಲಿರುತ್ತದೆ. ಯಾವುದೇ ಅನಾಹುತಗಳಿಗೆ ಇಲಾಖೆಯು ಹೊಣೆಯಾಗುವುದಿಲ್ಲ.
26. ಈಗಾಗಲೇ ಈ ಕಛೇರಿಯಲ್ಲಿ ನೊಂದಾಯಿತ ಅರಣ್ಯ ಗುತ್ತಿಗೆದಾರರಿಗೆ ಮಾತ್ರ ಟೆಂಡರ್ ಫಾರಂ ಗಳನ್ನು ನೀಡಲಾಗುವುದು.
27. ಟೆಂಡರ್ ಪ್ರಕಟಣೆ ಹೊರಡಿಸಿದ ನಂತರ ಯಾವುದೇ ಗುತ್ತಿಗೆದಾರರ ನೊಂದಣಿಯನ್ನು ಮಾಡಲು ಅವಕಾಶವಿರುವುದಿಲ್ಲ ಹಾಗೂ ಈ ಬಗ್ಗೆ ಯಾವುದೇ ಆಕ್ಷೇಪಣೆಗಳಿಗೆ ಅವಕಾಶವಿರುವುದಿಲ್ಲ.
28. ಹೆಚ್ಚಿನ ವಿವರಗಳು ಬೇಕಾದಲ್ಲಿ ಈ ಕಛೇರಿ0ು ಕೆಲಸದ ದಿನಗಳಲ್ಲಿ ಪಡೆ0ುಬಹುದು.

**ಸೌರಬೇಲಿ ನಿರ್ಮಿಸುವ ಟೆಂಡರ್‌ಗೆ ಹೆಚ್ಚುವರಿ ಷರತ್ತುಗಳು**

1. ಅಳವಡಿಸಲಾಗುವ ಸೋಲಾರ್ ಶಕ್ತಿ ಬೇಲಿಯು ಕನಿಷ್ಟ ಮೂರು ವರ್ಷಗಳವರೆಗೆ ಸುಸ್ಥಿಯಲ್ಲಿ ಚಾಲ್ತಿ ಇದ್ದು ಮೂರು ವರ್ಷ ಗ್ಯಾರಂಟಿ ಅವಧಿ ಸಮಾಧಾನಕರವಾಗಿ ಮುಗಿದ ನಂತರ ಭದ್ರತಾ ಠೇವಣಿ ಹಿಂತಿರುಗಿಸುವುದು.
2. ಸೋಲಾರ್ ತಂತಿ ಬೇಲಿ ನಿರ್ಮಾಣ ಮಾಡಲು ಅಗತ್ಯವಿರುವ ಕಾಮಗಾರಿಗಳ ಪೂರೈಕೆ ಬಗ್ಗೆ ಹಾಗೂ ಬೇಲಿ ನಿರ್ಮಾಣ ಮಾಡಲು ತಾಂತ್ರಿಕ ಪರಿಣಿತಿ ಹೊಂದಿರುವ ಬಗ್ಗೆ ಅಧಿಕೃತ ದೃಡೀಕರಣ ಪತ್ರ ಲಗತಿಸಬೇಕು.
3. ಈ ಕಾಮಗಾರಿಯಲ್ಲಿ ಅಳವಡಿಸಲಾಗುವ ಸಾಮಾಗ್ರಿಗಳಿಗೆ ಸಂಬಂಧಿಸಿದಂತೆ ಐ.ಎಸ್.ಐ/ಬಿ.ಎಸ್.ಐ/ತತ್ಸಮಾನ ಸಂಸ್ಥೆಗಳಿಂದ ಪಡೆದ ದೃಡೀಕೃತ ಪತ್ರ ಲಗತ್ತಿಸಿರಬೇಕು.
4. ಸೋಲಾರ್ ತಂತಿ ಬೇಲಿಯು ಕನಿಷ್ಠ 5 ತಂತಿಗಳಿಂದ ಕೂಡಿರಬೇಕು ಹಾಗೂ ರಸ್ತೆಗಳು ಇರುವಲ್ಲಿ ಗೇಟ್‌ಗಳನ್ನು ನಿರ್ಮಿಸಬೇಕು.
5. ಸೋಲಾರ್ ತಂತಿ ಬೇಲಿಯ ನಿರ್ಮಾಣದ ಕೆಲಸವನ್ನು ಅರಣ್ಯ ಇಲಾಖೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ನಿರ್ವಹಿಸಿದ್ದಲ್ಲಿ ಅದರ ಬಗ್ಗೆ ತೃಪ್ತಿದಾಯಕ ಪತ್ರ ಬರೆದು ಪಡೆದು ಸಲ್ಲಿಸಬೇಕು.
6. ವನ್ಯಪ್ರಾಣಿಗಳನ್ನು ನಿಯಂತ್ರಿಸುವುದರ ಬಗ್ಗೆ ಗುತ್ತಿಗೆದಾರರು ಸಾಕಷ್ಟು ಜ್ಞಾನವನ್ನು ಹೊಂದಿರಬೇಕು.
7. ಪ್ರತಿಯೊಂದು ವನ್ಯಪ್ರಾಣಿಯನ್ನು ಪರಿಣಾಮಕಾರಿಯಾಗಿ ನಿಯಂತ್ರಿಸಲು ನಿರ್ಮಾಣ ಮಾಡುವ ತಂತಿ ಬೇಲಿಯಲ್ಲಿ ಅಳವಡಿಸಲಾಗುವ ತಂತಿಗಳ ಸಂಖ್ಯೆ, ಈ ತಂತಿಗಳ ಮಧ್ಯೆ ಇರುವ ದೂರ, ಭಾಗಗಳ ಸಂಖ್ಯೆ, ಮೂಲೆ ಕಂಬಗಳ ಸಂಖ್ಯೆ, ಕಂಬಗಳ ಸಂಖ್ಯೆ, ಮಧ್ಯ ಬರುವ ಕಂಬಗಳ ಸಂಖ್ಯೆ ಮತ್ತು ಇತ್ಯಾದಿ ಭಾಗಗಳು ರಚನೆಯ ವಿವರಗಳಲ್ಲಿ ಒಳಗೊಂಡಿರಬೇಕು.
8. ತಂತಿಬೇಲಿಯು ಪ್ರತಿ 100 ಮೀಟರ್‌ಗೆ ಭಾಗಗಳನ್ನೊಳಗೊಂಡಿರಬೇಕು
9. ಕನಿಷ್ಟ ಪ್ರತಿ 2 ತಿಂಗಳಿಗೊಮ್ಮೆ ಅಥವಾ ಅವಶ್ಯಕತೆ ಇದ್ದಾಗಲೆಲ್ಲಾ ತಪಾಸಣೆಯನ್ನು ಕಡ್ಡಾಯವಾಗಿ ಮಾಡಬೇಕು ಹಾಗೂ ಬೇಲಿಯು ಕಾರ್ಯನಿರತವಾಗಿರುವಂತೆ ನೋಡಿಕೊಳ್ಳಬೇಕು.
10. ಗುತ್ತಿಗೆದಾರರು ನೀಡುವ ದರಗಳು 3 ವರ್ಷಗಳ ನಿರ್ವಹಣಾ ಗುತ್ತಿಗೆಯ ವೆಚ್ಚಗಳನ್ನೊಳಗೊಂಡಿರುಬೇಕು.
11. ಸೋಲಾರ್ ತಂತಿ ಬೇಲಿಯನ್ನು ಪಾಲನೆ ಮಾಡಿ ನಿರ್ವಹಿಸಿದ ಬಗ್ಗೆ ಅರಣ್ಯ ಸಿಬ್ಬಂದಿಗಳಿಗೆ ಸಾಕಷ್ಟು ತರಬೇತಿಯನ್ನು ಉಚಿತವಾಗಿ ನೀಡುವುದಾಗಿ ಲಿಖಿತವಾಗಿ ತಿಳಿಸಬೇಕು.
12. ಸೌರಶಕ್ತಿ ತಂತಿ ಬೇಲಿಗೆ ಅಳವಡಿಸುವ ಸಾಮಾಗ್ರಿಗಳ ಗುಣಮಟ್ಟದ ಬಗ್ಗೆ ಕೇಂದ್ರ ಸರ್ಕಾರದ ಸಾಂಪ್ರದಾಯಕವಲ್ಲದ ಇಂಧನ ಗುಣಮಟ್ಟದ ಬಗ್ಗೆ ಚಾಲ್ತಿ ವರ್ಷದ ಪರೀಕ್ಷಣಾ ಪತ್ರ ಸಲ್ಲಿಸಬೇಕು.
13. ಸೌರಶಕ್ತಿ ತಂತಿ ಬೇಲಿಗೆ ಅಳವಡಿಸುವ ಬಿಡಿಭಾಗಗಳನ್ನು ಹಾಗೂ ಬ್ಯಾಟರಿಗಳನ್ನು ಬೇರೆ ಕಂಪನಿಗಳಿಂದ ಪಡೆದು ಸರಬರಾಜು ಮಾಡುತ್ತಿದ್ದ ಪಕ್ಷದಲ್ಲಿ ಆಯಾ ಕಂಪನಿಗಳ ಚಾಲ್ತಿ ವರ್ಷಕ್ಕೆ ಎಂ.ಎನ್.ಇ.ಎಸ್ ನಿಂದ ಅನುಮೋದನೆಗೊಂಡು ಸರಬರಾಜು ಮಾಡುವ ಬಗ್ಗೆ ಪಡೆದ ಅನುಪತ್ರ ಹಾಗೂ ಪರೀಕ್ಷಣಾ ಪತ್ರ ಸಲ್ಲಿಸಬೇಕು ಸಾಂಪ್ರಾದಾಯಿಕವಲ್ಲದ ಇಂಧನ ಮೂಲಗಳ ಮಂತ್ರಾಲಯದ ಎಂ.ಎನ್.ಇ.ಎಸ್ ಇದರ ಅಧಿಕೃತ ಕೇಂದ್ರಗಳಿಂದ ಪಡೆದ ಪ್ರಮಾಣ ಪತ್ರ ಸಲ್ಲಿಸಬೇಕು ಹಾಗೂ ಉಪಕರಣಗಳ ಉತ್ಪಾದನಾ ಲೈಸೆನ್ಸ್ ಹೊಂದಿರುವ ಬಗ್ಗೆ ದಾಖಲೆಗಳನ್ನು ಸಲ್ಲಿಸಬೇಕು.
14. ಅಳವಡಿಸುವ ಸಾಮಾಗ್ರಿಗಳು ಐ.ಎಸ್.ಐ ಗುಣಮಟ್ಟವುಳ್ಳದ್ದಾಗಿರಬೇಕು.
15. ಅಳವಡಿಸುವ ಸಾಮಾಗ್ರಿಗಳಿಗೆ ಗ್ಯಾರಂಟಿ ಅವಧಿಯನ್ನು ನಮೂದಿಸಬೇಕು.
16. ಸೌರಶಕ್ತಿ ತಂತಿ ಬೇಲಿಗೆ ಅಳವಡಿಸುವ ಸಾಮಾಗ್ರಿಗಳ ಮಾದರಿ ವಿವರಣೆಗಳನ್ನು ನಮೂದಿಸಬೇಕು.
17. ಅಳವಡಿಸಲಾಗುವ ಸೋಲಾರ್ ತಂತಿಬೇಲಿಯು ಕನಿಷ್ಠ 3ವರ್ಷದ ವರೆಗೆ ಚಾಲ್ತಿಯಲ್ಲಿರುವುದರ ಬಗ್ಗೆ ಗ್ಯಾರಂಟಿ ಪತ್ರ ನೀಡಬೇಕು.

18. ಯಶಸ್ವಿ ಬಿಡ್ಡುದಾರರು ಕಾಮಗಾರಿಯಲ್ಲಿ ಅಳವಡಿಸುವ ಸಾಮಾಗ್ರಿಗಳು ಸುಸ್ತಿಯಲ್ಲಿ ಇಲ್ಲದಿದ್ದಾಗ ಅದನ್ನು ಉಚಿತವಾಗಿ ದುರಸ್ಥಿ ಮಾಡಿಕೊಡಲು ಬದ್ಧರಾಗಿರುವ ಬಗ್ಗೆ ದೃಡೀಕರಣ ಪತ್ರ ನೀಡಬೇಕು.
19. ಯಶಸ್ವಿ ಟೆಂಡರ್ ದಾರರು ನಿರ್ಮಿಸುವ ಸೌರಶಕ್ತಿ ತಂತಿ ಬೇಲಿಯನ್ನು 3 ವರ್ಷದ ವರೆಗೆ ಸುಸ್ತಿಯಲ್ಲಿಟ್ಟು ನಿರ್ವಹಣೆ ಮಾಡುವ ಬಗ್ಗೆ ದೃಡೀಕರಣ ಪತ್ರ ನೀಡಬೇಕು ಮತ್ತು 3 ವರ್ಷದವರೆಗೆ ಉಚಿತವಾಗಿ ಬ್ಯಾಟರಿ ನಿರ್ವಹಣೆ ಮಾಡುವುದಾಗಿ ದೃಡೀಕರಣ ಪತ್ರ ಸಲ್ಲಿಸಬೇಕು.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಪಿ.ಆರ್. 609 ಕಾವೇರಿ ವನ್ಯಜೀವಿ ವಿಭಾಗ, ಕನಕಪುರ.

## ತೋಟಗಾರಿಕೆ ಇಲಾಖೆ
## ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು
## ಟೆಂಡರ್ ಆಹ್ವಾನ ಪ್ರಕಟಣೆ
**ಸಂಖ್ಯೆ:ತೋಉನಿ/ಕಉ/ವಿನಿ2/96/2008–09, ದಿನಾಂಕ: 22ನೇ ಅಕ್ಟೋಬರ್ 2008**

ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಇವರ ಕಛೇರಿ ಅಧೀನದಲ್ಲಿ ಬರುವ ಕಬ್ಬನ್ ಉದ್ಯಾನವನ ನರ್ಸರಿ, ಶೇಷಾದ್ರಿ ವಿಭಾಗ, ರಾಜಭವನ ಉದ್ಯಾನವನ, ವಿಧಾನಸೌಧ ಉದ್ಯಾನವನ, ಹಾಗೂ ಇಂದಿರಾಗಾಂಧಿ ಸಂಗೀತ ಕಾರಂಜಿ ವಿಭಾಗ, ಕುಮಾರಕೃಪ ಹಾಗೂ ಬಾಲಬ್ರೂಹಿ ವಿಭಾಗದ ಉದ್ಯಾನವನಗಳಲ್ಲಿ ಹಾಲಿ ಇರುವ ಕೊಳವೆ ಬಾವಿಗಳು, ತೆರೆದ ಬಾವಿಗಳ ಮೂಲಕ ವಿವಿಧ ಉದ್ಯಾನವನದ ನಿರ್ವಹಣೆಗೆ ನೀರು ಸರಬರಾಜು ಮಾಡಲು ಕೆಳಕಂಡ ವಿದ್ಯುತ್‌ಚ್ಛಕ್ತಿ ಮೋಟಾರ್, ಲಾನ್‌ಮೂವರ್ ಮೋಟಾರ್, ಮತ್ತು ಸ್ರಿಂಕಲರ್‌ಗಳನ್ನು ದುರಸ್ತಿ ಮತ್ತು ನಿರ್ವಹಣೆಯನ್ನು ಗುತ್ತಿಗೆ ಆಧಾರದ ಮೇಲೆ ಆದೇಶ ನೀಡಿದ ದಿನಾಂಕದಿಂದ ಒಂದು ವರ್ಷ ಅವಧಿಗೆ ವಾರ್ಷಿಕ ನಿರ್ವಹಿಸಲು ಕ್ಲಾಸ್–1 ವಿದ್ಯುತ್ ಗುತ್ತಿಗೆದಾರರಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಆಸಕ್ತಿಯುಳ್ಳ ಗುತ್ತಿಗೆದಾರರು ನಿಗಧಿತ ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ಖರೀದಿಸಿ ಗುತ್ತಿಗೆ ಕೆಲಸಕ್ಕೆ ತಮ್ಮ ಕನಿಷ್ಟ ದರಗಳನ್ನು ನಮೂದಿಸಿ ಟೆಂಡರ್‌ಗಳನ್ನು ಮೊಹರು ಮಾಡಿದ ಲಕೋಟೆಯಲ್ಲಿ "ಕಬ್ಬನ್ ಉದ್ಯಾನವನ ಅಧೀನ ವಿದ್ಯುತ್ ಮೋಟಾರ್ ಹಾಗೂ ಕಾರಂಜಿಗಳ ನಿರ್ವಹಣೆಗೆ ಟೆಂಡರ್" ಎಂದು ನಮೂದಿಸಿ ದಿನಾಂಕ: 18.12.2008 ರೊಳಗೆ ಸಂಜೆ 4.00 ಗಂಟೆಯೊಳಗೆ ಈ ಕಛೇರಿಗೆ ತಲುಪುವಂತೆ ಸಲ್ಲಿಸಬಹುದಾಗಿದೆ.

–; ವಿವಿಧ ವಿಭಾಗಗಳಲ್ಲಿ ನಿರ್ವಹಿಸಬೇಕಾದ ಕೆಲಸಗಳ ವಿವರ:–

| ಕ್ರ. ಸಂ. | ವಿದ್ಯುತ್ ಮೋಟಾರ್ ಮತ್ತು ಪಂಪ್‌ಸೆಟ್ ಮತ್ತು ಕಾರಂಜಿಯ ವಿವರ | ಪಂಪ್‌ಸೆಟ್ ಕೊಳವೆ ಬಾವಿ, ತೆರೆದ ಬಾವಿ ಇರುವ ಸಂಖ್ಯೆ |
|---|---|---|
| 1. | ಎ) **ಕಬ್ಬನ್ ಉದ್ಯಾನವನ ನರ್ಸರಿಃ–** | |
| | 1. 1 ಹೆಚ್‌ಪಿ ಕ್ರಾಮಟನ್ ಮೋನೋಬ್ಲಾಕ್ ಪಂಪ್‌ಸೆಟ್ | 1 ಸಂಖ್ಯೆ |
| | 2. 1 ಹೆಚ್‌ಪಿ ಸುಗುಣ ಮೋನೋಬ್ಲಾಕ್ | 1 ಸಂಖ್ಯೆ |
| | 3. 1 ಹೆಚ್‌ಪಿ ಟೆಕ್ಸ್‌ಮೊ ಮೊನೋಬ್ಲಾಕ್ | 1 ಸಂಖ್ಯೆ |
| | 4. 3 ಹೆಚ್‌ಪಿ 17 ಸ್ಟೇಜ್ ಅಟ್ಲಾಂಟಾ ಸಬ್‌ಮರ್ಸಿಬಲ್ ಪಂಪ್ | 1 ಸಂಖ್ಯೆ |
| | 5. 5 ಹೆಚ್‌ಪಿ ಲಾನ್‌ಮೂವರ್ಸ್ | 1 ಸಂಖ್ಯೆ |
| | 6. 3 ಹೆಚ್‌ಪಿ ಟೆಕ್‌ಮೊ ಮೋನೋಬ್ಲಾಕ್ ಪಂಪ್‌ಸೆಟ್ (ರಾಣಿ ಪಾರ್ಕ್‌ನಲ್ಲಿನ) | 1 ಸಂಖ್ಯೆ |
| | 7. 2 ಹೆಚ್‌ಪಿ ಲಾನ್‌ಮೂವರ್ | 2 ಸಂಖ್ಯೆ |
| | 8. ಪೈಪ್‌ಲೈನ್ಸ್ ಗೇಜ್ ವಾಲ್ವ್ಸ್, ಸ್ಟಾಟರ್ಸ್, ಪ್ಲಂಬಿಂಗ್ ವರ್ಕ್ ಕೇಬಲ್ ರಿಪೇರಿ ಇತ್ಯಾದಿ | –– |
| | 9. ಉಪ ನಿರ್ದೇಶಕರ ಕೊಠಡಿ, ಸಹಾಯಕ ತೋಟಗಾರಿಕೆ ಅಧಿಕಾರಿ ಕಬ್ಬನ್ ಪಾರ್ಕ್‌ರವರ ಕೊಠಡಿಯಲ್ಲಿರುವ ಹಾಗೂ ಕಛೇರಿಯಲ್ಲಿರುವ ಟ್ಯೂಬುಲೈಟ್‌ಗಳು, ಚೌಕಗಳು, ಸ್ಟಾಟರ್‌ಗಳು ಮತ್ತು ಪ್ಯಾನ್‌ಗಳ ದುರಸ್ತಿ ಹಾಗೂ ನಿರ್ವಹಣೆ | –– |
| | 10. 2 ಹೆಚ್‌ಪಿ ಲಾನ್‌ಮೂವರ್ 3 ಪೇಸ್ | 1 ಸಂಖ್ಯೆ |
| | 11. ಬ್ರಶ್ ಕಟರ್ | 1 ಸಂಖ್ಯೆ |
| | 12. ಕಬ್ಬನ್ ಪಾರ್ಕ್ ಕಛೇರಿ ಪಕ್ಕದಲ್ಲಿರುವ ಮತ್ತು ಮಹಾರಾಜ ಪ್ರತಿಮೆ ಬಳಿ ಇರುವ ವಾಟರ್ ಕೂಲರ್ ನಿರ್ವಹಣೆಗಾಗಿ ದುರಸ್ತಿ | 2 ಸಂಖ್ಯೆ |
| | 13. ಕಬ್ಬನ್‌ಪಾರ್ಕ್ ನರ್ಸರಿಯಲ್ಲಿ 3 ಹೆಚ್‌ಪಿ ಮನೋಬ್ಲಾಕ್ ಮತ್ತು 7.5 ಹೆಚ್‌ಪಿ ಮೋಟಾರ್ | 1 ಸಂಖ್ಯೆ |

| ಕ್ರ. ಸಂ. | ವಿದ್ಯುತ್ ಮೋಟಾರ್ ಮತ್ತು ಪಂಪ್‌ಸೆಟ್ ಮತ್ತು ಕಾರಂಜಿಯ ವಿವರ | ಪಂಪ್‌ಸೆಟ್ ಕೊಳವೆ ಬಾವಿ, ತೆರೆದ ಬಾವಿ ಇರುವ ಸಂಖ್ಯೆ |
|---|---|---|
| 2. | **ಕಂಠೀರವ ಕ್ರೀಡಾಂಗಣ:–** | |
| | 1. 30 ಹೆಚ್‌ಪಿ ಕಿರ್ಲೋಸ್ಕರ್ ಮೋಟಾರ್ ಪಂಪ್‌ಸೆಟ್ | 1 ಸಂಖ್ಯೆ |
| | 2. 30 ಹೆಚ್‌ಪಿ ಎನ್.ಜಿ.ಇ.ಎಫ್. ಮೋಟಾರ್ ಪಂಪ್‌ಸೆಟ್ | 1 ಸಂಖ್ಯೆ |
| | 3. 5 ಹೆಚ್‌ಪಿ ಸಬ್‌ಮರ್ಸಿಬಲ್ ಪಂಪ್‌ಸೆಟ್ ಮತ್ತು ಪ್ಯಾನೆಲ್ ಬೋರ್ಡ್ಸ್ | 3 ಸಂಖ್ಯೆ |
| | 4. 30 ಹೆಚ್‌ಪಿ ಸ್ಟಾರ್ಟರ್ಸ್, ಮೈನ್ ಸ್ವೀಚಸ್ ಇತ್ಯಾದಿ | 2 ಸೆಟ್ |
| 3. | **ಮಹಾರಾಜ ಪ್ರತಿಮೆ ಕಾರಂಜಿ:–** | |
| | 1. 10 ಹೆಚ್‌ಪಿ ಸೋನಾ ಓಪನ್‌ವೆಲ್ ಸಬ್‌ಮರ್ಸಿಬಲ್ ಪಂಪ್‌ಸೆಟ್ ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| | 2. 1 ಹೆಚ್‌ಪಿ ಸುಗುಣ ಮೋನೋಬ್ಲಾಕ್ ಪಂಪ್‌ಸೆಟ್ (ಹೈಕೋರ್ಟ್ ಗಾರ್ಡ್‌ನ್ ಬಳಿ) | 1 ಸಂಖ್ಯೆ |
| | 3. 1 ಹೆಚ್‌ಪಿ ಕ್ರಾಮ್‌ಟನ್ ಮೋನೋಬ್ಲಾಕ್ ಪಂಪ್‌ಸೆಟ್ (ಹೈಕೋರ್ಟ್ ಗಾರ್ಡ್‌ನ್ ಬಳಿ) | 1 ಸಂಖ್ಯೆ |
| | 4. ಪೈಪ್‌ಲೈನ್ಸ್, ಗೇಟ್‌ವಾಲ್ಸ್ ಇತ್ಯಾದಿ | 1 ಸಂಖ್ಯೆ |
| | 5. 3 ಹೆಚ್‌ಪಿ ಓಪನ್‌ವೆಲ್ ಸಬ್‌ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನಲ್ (ಟೆರಸ್ ಗಾರ್ಡ್‌ನ್) | |
| | 6. ಬ್ಯಾಂಡ್‌ಸ್ಟ್ಯಾಂಡ್ ಪ್ರದೇಶದಲ್ಲಿ | |
| | 1 .ಫೆರಿ ಕಾರಂಜಿ, ಪಂಪ್‌ಸೆಟ್ಟ್ ಮೋಟಾರ್ | 1 ಸಂಖ್ಯೆ |
| | 2. ರಾಣಿಪಾರ್ಕ್ ಕಾರಂಜಿ ಪಂಪ್‌ಸೆಟ್ಟ್ ಮೋಟಾರ್ | 1 ಸಂಖ್ಯೆ |
| 4. | **ಶೇಷಾದ್ರಿ ವಿಭಾಗಳ–** | |
| | 1. ಬಾವಿ ನಂ. 1–10 ಹೆಚ್‌ಪಿ ಬಿಕಾನ್ ಮೋನೋಬ್ಲಾಕ್ ಪಂಪ್‌ಸೆಟ್ (ಪ್ಯಾನಲ್ ಬೋರ್ಡ್) | 1 ಸಂಖ್ಯೆ |
| | 2. ಬಾವಿ ನಂ. 2–5 ಹೆಚ್‌ಪಿ ಕ್ರಾಮ್‌ಟನ್ ಕಪಲ್ಡ್ ಪಂಪ್ ಸೆಟ್ ಮತ್ತು ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| | 3. ಬಾವಿ ನಂ. 3–10 ಹೆಚ್‌ಪಿ ಕಿರ್ಲೋಸ್ಕರ್ ಕಪಲ್ಡ್ ಪಂಪ್‌ಸೆಟ್ ವಿತ್ ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| | 4. ಬಾವಿ ನಂ.6–5 ಹೆಚ್‌ಪಿ ಕ್ರಾಂಪ್ಟನ್ ಕಪಲ್ಡ್ ಪಂಪ್‌ಸೆಟ್ ವಿತ್ ಸ್ಟಾರ್ಟರ್ | 1 ಸಂಖ್ಯೆ |
| | 5. ಬಾವಿ ನಂ. 7, 5 ಹೆಚ್‌ಪಿ ಕ್ರಾಂಪ್ಟನ್ ಕಪಲ್ಡ್ ಪಂಪ್‌ಸೆಟ್ ವಿತ್ ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| | 6. ಬೋರ್‌ವೆಲ್ ನಂ. 1,2 ಮತ್ತು 3–6 ಹೆಚ್‌ಪಿ 17 ಸ್ಟೇಜ್ ಅಟ್ಲಾಂಟಾ ಸಬ್‌ಮರ್ಸಿಬಲ್ ಪಂಪ್‌ಸೆಟ್ | 3 ಸಂಖ್ಯೆ |
| | 7. 2 ಹೆಚ್‌ಪಿ ಲಾನ್‌ಮೂವರ್ | 1 ಸಂಖ್ಯೆ |
| | 8. 1 ಹೆಚ್‌ಪಿ.ಸಿ.ಆರ್.ಐ. ಮೋನೋಬ್ಲಾಕ್ ಪಂಪ್‌ಸೆಟ್ | 1 ಸಂಖ್ಯೆ |
| | 9. ಸ್ಪಿಂಕಲರ್ಸ್ ಗೇಟ್ ವಾಲ್, ಪ್ಲಂಬಿಂಗ್ ವರ್ಕ್ ಇತ್ಯಾದಿ | ––– |
| | 10. 5 ಹೆಚ್‌ಪಿ 3 ಫೇಸ್ ಮೋಟಾರ್, | 1 ಸಂಖ್ಯೆ |
| | 11. 2 ಹೆಚ್‌ಪಿ 3 ಫೇಸ್ ಮೋಟಾರ್ | 1 ಸಂಖ್ಯೆ |
| | 12. ಲಾನ್‌ಮೂವರ್ 2 ಹೆಚ್‌ಪಿ 3 ಫೇಸ್ | 1 ಸಂಖ್ಯೆ |
| | 13. 5 ಹೆಚ್‌ಪಿ 3 ಪ್ಯಾನ್ | 1 ಸಂಖ್ಯೆ |
| 5. | **ಮಕ್ಕಳ ಗ್ರಂಥಾಲಯ:–** | |
| | 1. 5 ಹೆಚ್‌ಪಿ ಪಂಪ್‌ಸೆಟ್ ವಿತ್ ಪ್ಯಾನೆಲ್ ಬೋರ್ಡ್ | 1 ಸಂಖ್ಯೆ |
| | 2. ಪೈಪ್‌ಲೈನ್ ಗೇಟ್‌ವಾಲ್ಸ್ ಇತ್ಯಾದಿ | –– |
| 6. | **ರೋಸ್ ಗಾರ್ಡ್‌ನ್:–** | |
| | 1. 7.5 ಹೆಚ್‌ಪಿ ಕಿರ್ಲೋಸ್ಕರ್ ಮೋನೋಬ್ಲಾಕ್ ಪಂಪ್‌ಸೆಟ್ | 1 ಸಂಖ್ಯೆ |
| | 2. 7.5 ಹೆಚ್‌ಪಿ ಅಟ್ಲಾಂಟ ಸಬ್‌ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನಲ್ ಬೋರ್ಡ್ (ಗ್ರಂಥಾಲಯದ ಬಳಿ, ವಿಧಾನಸೌಧ ನರ್ಸರಿಯವರು ಉಪಯೋಗಿಸಿರುತ್ತಾರೆ) | 1 ಸಂಖ್ಯೆ<br>1 ಸಂಖ್ಯೆ |
| | 3. ಪೈಪ್‌ಲೈನ್ ಗೇಟ್ ವಾಲ್ಸ್ ಪಬ್ಲಿಂಗ್ ವರ್ಕ ಇತ್ಯಾದಿ | –– |

| ಕ್ರ. ಸಂ. | ವಿದ್ಯುತ್ ಮೋಟಾರ್ ಮತ್ತು ಪಂಪ್‌ಸೆಟ್ ಮತ್ತು ಕಾರಂಜಿಯ ವಿವರ | ಪಂಪ್‌ಸೆಟ್ ಕೊಳವೆ ಬಾವಿ, ತೆರೆದ ಬಾವಿ ಇರುವ ಸಂಖ್ಯೆ |
|---|---|---|
| 7. | **ಗೋಪಾಲಗೌಡ ಕಾರಂಜಿ:–** | |
| | 1. 10 ಹೆಚ್‌ಪಿ ಸೋನ ಓಪನ್‌ವೆಲ್ ಸಬ್‌ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| | 2. 7.5 ಹೆಚ್‌ಪಿ ಸೋನ ಓಪನ್ ಸಬ್ ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನೆಲ್ | 2 ಸಂಖ್ಯೆ |
| | 3. 20 ಹೆಚ್‌ಪಿ ಕ್ರಾಂಪ್ಟನ್ ಕಪಲ್ಡ್ ಮೋಟಾರ್ ವಿತ್ ಸ್ಟಾರ್ಟರ್ (ಸ್ಟೇಜ್ ಪಂಪ್) ವಿಧಾನಸೌಧ ನರ್ಸರಿಯವರು ಉಪಯೋಗಿಸುತ್ತಿದ್ದಾರೆ) | 1 ಸಂಖ್ಯೆ |
| | 4. ಲೈಟ್ಸ್ (ಕಾರಂಜಿ) | 15 ಸಂಖ್ಯೆ |
| 8. | **ವಿಧಾನಸೌಧ ನರ್ಸರಿ:–** | |
| | 1. 15 ಹೆಚ್‌ಪಿ ಎ.ಇ.ಐ. ಕಪಲ್ಡ್ ಮೋಟಾರ್ ಪಂಪ್‌ಸೆಟ್ ವಿತ್ ಪ್ಯಾನಲ್ ಬೋರ್ಡ್ | 2 ಸಂಖ್ಯೆ |
| | 2. 3 ಹೆಚ್‌ಪಿ ಬಿಕಾನ್ ಮೋನೋಬ್ಲಾಕ್ ಪಂಪ್‌ಸೆಟ್ ವಿತ್ ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| | 3. 15 ಹೆಚ್‌ಪಿ ಬಿಕಾನ್ ಮೋನೋಬ್ಲಾಕ್ ಪಂಪ್‌ಸೆಟ್ ವಿತ್ ಸ್ಟಾರ್ಟರ್ (ವಿಧಾನಸೌಧ ಪಂಪ್‌ಹೌಸ್) | 1 ಸಂಖ್ಯೆ |
| | 4. 10 ಹೆಚ್‌ಪಿ ಬಿಕಾನ್ ಮೋನೋಬ್ಲಾಕ್ ಪಂಪ್‌ಸೆಟ್ (ವಿಧಾನಸೌಧ ಪಂಪ್‌ಹೌಸ್) | 1 ಸಂಖ್ಯೆ |
| | 5. 2 ಹೆಚ್‌ಪಿ ಲಾನ್‌ಮೂವರ್ ಮೋಟಾರ್ | 2 ಸಂಖ್ಯೆ |
| | 6. 1 ಹೆಚ್‌ಪಿ ಲಾನ್‌ಮೂವರ್ ಮೋಟಾರ್ | 1 ಸಂಖ್ಯೆ |
| | 7. 2 ಹೆಚ್‌ಪಿ ಮೋನೋಬ್ಲಾಕ್ | 1 ಸಂಖ್ಯೆ |
| | 8. 3 ಹೆಚ್‌ಪಿ ಸುಗಣ ಮೋನೋಬ್ಲಾಕ್ ವಿತ್ ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| | 9. ಸ್ಪಿಂಕಲರ್ಸ್ , ಪೈಪ್‌ಲೈನ್ ಗೇಟ್‌ವಾಲ್ಸ್ ಇತ್ಯಾದಿ | –– |
| | 10. ಬ್ರಶ್ ಕಟರ್ | 1 ಸಂಖ್ಯೆ |
| | 11. 2 ಹೆಚ್‌ಪಿ 3ಫೇಸ್ ಮೋಟರ್ | 1 ಸಂಖ್ಯೆ |
| | 12. 10 ಹೆಚ್‌ಪಿ ಓಪನ್‌ವೆಲ್ ಸಬ್‌ಮರ್ಸಿಬಲ್ ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| | 13. 3 ಹೆಚ್‌ಪಿ ಓಪನ್‌ವೆಲ್ ಸಬ್‌ಮರ್ಸಿಬಲ್ ಪ್ಯಾನಲ್ ಬೋರ್ಡ್ | 2 ಸಂಖ್ಯೆ |
| | 14. 5 ಹೆಚ್‌ಪಿ ಓಪನ್‌ವೆಲ್ ಸಬ್‌ಮರ್ಸಿಬಲ್ ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| 9. | **ರಾಜಭವನ:–** | |
| | 1. 5 ಹೆಚ್‌ಪಿ ಕೆ.ಎಸ್.ಬಿ. ಸಬ್‌ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನಲ್‌ಬೋರ್ಡ್ | 1 ಸಂಖ್ಯೆ |
| | 2. 5 ಹೆಚ್‌ಪಿ ಅಟ್ಲಾಂಟ್ ಸಬ್‌ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನಲ್‌ಬೋರ್ಡ್ | 1 ಸಂಖ್ಯೆ |
| | 3. 10 ಹೆಚ್‌ಪಿ ಕಿರ್ಲೋಸ್ಕರ್ ಕಪಲ್ಡ್ ಪಂಪ್‌ಸೆಟ್ ವಿತ್ ಪ್ಯಾನಲ್‌ಬೋರ್ಡ್ | 1 ಸಂಖ್ಯೆ |
| | 4. 10 ಹೆಚ್‌ಪಿ ಎನ್.ಜಿ.ಇ.ಎಫ್. ಮೋನೋಬ್ಲಾಕ್ ಪಂಪ್‌ಸೆಟ್ ವಿತ್ ಪ್ಯಾನಲ್‌ಬೋರ್ಡ್ | 2 ಸಂಖ್ಯೆ |
| | 5. 1 ಹೆಚ್‌ಪಿ ಮೋನೋಬ್ಲಾಕ್ ಪಂಪ್‌ಸೆಟ್ | 2 ಸಂಖ್ಯೆ |
| | 6. 2 ಹೆಚ್‌ಪಿ ಲಾನ್‌ಮೂವರ್ | 1 ಸಂಖ್ಯೆ |
| | 7. 1 ಹೆಚ್‌ಪಿ ಲಾನ್‌ಮೂವರ್ | 1 ಸಂಖ್ಯೆ |
| | 8. ಪೈಪ್‌ಲೈನ್ಸ್ ಸ್ಪಿಂಕಲರ್ಸ್ ಪ್ಲಂಬಿಂಗ್ ವರ್ಕ್ ಇತ್ಯಾದಿ | –– |

| ಕ್ರ. ಸಂ. | ವಿದ್ಯುತ್ ಮೋಟಾರ್ ಮತ್ತು ಪಂಪ್‌ಸೆಟ್ ಮತ್ತು ಕಾರಂಜಿಯ ವಿವರ | ಪಂಪ್‌ಸೆಟ್ ಕೊಳವೆ ಬಾವಿ, ತೆರೆದ ಬಾವಿ ಇರುವ ಸಂಖ್ಯೆ |
|---|---|---|
| 10. | **ಇಂದಿರಾಗಾಂಧಿ ಸಂಗೀತ ಕಾರಂಜಿ ವಿಭಾಗ:–** | |
| | 1. 3 ಹೆಚ್‌ಪಿ ಕಂಪ್ರೆಸರ್ ವಿತ್ ಸ್ಟಾರ್ಟರ್ (ಬೋರ್‌ವೆಲ್) | 4 ಸಂಖ್ಯೆ |
| | 2. 3 ಹೆಚ್‌ಪಿ ಟೆಕ್ಸ್‌ಮೊ ಮೋನೋಬ್ಲಾಕ್ ವಿತ್ ಸ್ಟಾರ್ಟರ್ಸ್ | 2 ಸಂಖ್ಯೆ |
| | 3. 1/2 ಹೆಚ್‌ಪಿ ಮೋನೋಬ್ಲಾಕ್ | 1 ಸಂಖ್ಯೆ |
| | 4. 2 ಹೆಚ್‌ಪಿ ಲಾನ್‌ಮೂವರ್ | 1 ಸಂಖ್ಯೆ |
| | 5. 1 ಹೆಚ್‌ಪಿ ಲಾನ್‌ಮೂವರ್ | 1 ಸಂಖ್ಯೆ |
| | 6. ಪೈಪ್ ಲೈನ್ಸ್ ಗೇಟ್‌ವಾಲ್ಸ್ , ಪ್ಲಂಬಿಗ್ ವರ್ಕ ಇತ್ಯಾದಿ | -- |
| | 7. 2 ಹೆಚ್‌ಪಿ 3 ಫೇಸ್ ಮೋಟಾರ್ | 1 ಸಂಖ್ಯೆ |
| 11. | **ಕುಮಾರಕೃಪಾ ವಿಭಾಗ:–** | |
| | 1. 1 ಹೆಚ್‌ಪಿ ಲಾನ್‌ಮೂವರ್ | 1 ಸಂಖ್ಯೆ |
| | 2. 2 ಹೆಚ್‌ಪಿ ಲಾನ್‌ಮೂವರ್ | 1 ಸಂಖ್ಯೆ |
| | 3. 2 ಹೆಚ್‌ಪಿ ಮೋನೋಬ್ಲಾಕ್ | 1 ಸಂಖ್ಯೆ |
| | 4. 1 ಹೆಚ್‌ಪಿ ಮೋನೋಬ್ಲಾಕ್ | 1 ಸಂಖ್ಯೆ |
| | 5. 2 ಹೆಚ್‌ಪಿ ಸಿಂಗಲ್ ಪೇಸ್ ಮೋಟಾರ್ | 1 ಸಂಖ್ಯೆ |
| 12. | **ಬಾಲಬ್ರೂಯಿ ವಿಭಾಗ:–** | |
| | 1. 2 ಹೆಚ್‌ಪಿ ಲಾನ್‌ಮೂವರ್ | 2 ಸಂಖ್ಯೆ |
| | 2. 1 ಹೆಚ್‌ಪಿ ಲಾನ್‌ಮೂವರ್ | 1 ಸಂಖ್ಯೆ |
| | 3. ಸ್ಟಾಟರ್ಸ್ | -- |
| | 4. ಪೈಪ್‌ಲೈನ್ಸ್ ಇತ್ಯಾದಿ | -- |
| 13. | **ಆಸ್ಪತ್ರೆ ವಿಭಾಗ:– (ವಾಣಿ ವಿಲಾಸ್ ಗಾರ್ಡ್‌ನ್):–** | |
| | 1. 2 ಹೆಚ್‌ಪಿ ಲಾನ್‌ಮೂವರ್ ಮೋಟಾರ್ ವಿತ್ ಸ್ಟಾಟರ್ | 1 ಸಂಖ್ಯೆ |
| | 2. 2 ಹೆಚ್‌ಪಿ 3 ಫೇಸ್ ಮೋಟಾರ್ | 1 ಸಂಖ್ಯೆ |
| 14. | **ವಿಕಾಸ ಸೌಧ ವಿಭಾಗ:–** | |
| | 1. 5 ಹೆಚ್‌ಪಿ ಕಿರ್ಲೋಸ್ಕರ್ ಓಪಲ್‌ವೆಲ್ ಸಬ್‌ಮರ್ಸಿಬಲ್ ಪಂಪ್‌ಸೆಟ್ಟ್, ಪ್ಯಾನಲ್‌ಬೋರ್ಡ್, | 1 ಸಂಖ್ಯೆ |
| | 2. 3 ಹೆಚ್‌ಪಿ ಟೈಕ್ಸ್‌ಮೋ ಓಪಲ್‌ವೆಲ್ ಸಬ್‌ಮರ್ಸಿಬಲ್ ಪಂಪ್‌ಸೆಟ್ಟ್, ಪ್ಯಾನಲ್‌ಬೋರ್ಡ್, | 1 ಸಂಖ್ಯೆ |
| | 3. ಪೈಪ್‌ಲೈನ್, ಸ್ಪಿಂಕ್ಲರ್ಸ್ | --- |

**ಗುತ್ತಿಗೆದಾರರಿಗೆ ಷರತ್ತುಗಳು ಹಾಗೂ ನಿಬಂದನೆಗಳು:–**

1. ನಿಗದಿತ ಟೆಂಡರ್ ಫಾರಂಗಳನ್ನು ದಿನಾಂಕ: 15.12.2008 ರಿಂದ 17.12.2008 ರವರೆಗೆ ಈ ಕಛೇರಿಯಿಂದ ರೂ. 500.00 ಪಾವತಿಸಿ ಪಡೆದುಕೊಳ್ಳಬಹುದು ಹಾಗೂ ಭರ್ತಿ ಮಾಡಿದ ಟೆಂಡರ್‌ಗಳನ್ನು ದಿನಾಂಕ: 18.12.2008 ರಂದು ಸಂಜೆ 4.00 ಗಂಟೆಯೊಳಗೆ ಈ ಕಛೇರಿಗೆ ಸಲ್ಲಿಸಬೇಕು. ಹಾಗೂ ಬಂದಿರುವ ಟೆಂಡರ್‌ಗಳನ್ನು ಸ್ಥಳದಲ್ಲೇ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ಅದೇ ದಿನ ಸಂಜೆ 5.00 ಗಂಟೆಗೆ ತೆರೆಯಲಾಗುವುದು.
2. ವಿದ್ಯುಚ್ಛಕ್ತಿ ಇಲಾಖೆಯಿಂದ ಪರವಾನಗಿ ಪಡೆದಿರುವ ಕ್ಲಾಸ್–1 ವಿದ್ಯುಚ್ಛಕ್ತಿ ಗುತ್ತಿಗೆದಾರರು ಮಾತ್ರ ಟೆಂಡರ್‌ಗಳನ್ನು ಮೇಲಿನ ಕೆಲಸಗಳಿಗೆ ಸಲ್ಲಿಸಲು ಅರ್ಹರಾಗಿರುತ್ತಾರೆ. ಹಾಗೂ ಟೆಂಡರ್‌ನ ಜೊತೆಗೆ ಕಾರ್ಮಿಕ ಇಲಾಖೆ ಅನುಮತಿ ಪತ್ರ 2007–08ನೇ ಸಾಲಿಗೆ ಅದಾಯ ತೆರಿಗೆ ದೃಢೀಕರಣ ಪತ್ರ ಸಲ್ಲಿಸಬೇಕು. 2006–07 ಹಾಗೂ 2007–08ನೇ ಸಾಲಿನಲ್ಲಿ ಪ್ರತಿಷ್ಠಿತ ಸಂಸ್ಥೆಗಳಲ್ಲಿ/ ಇಲಾಖೆಗಳಲ್ಲಿ ವಿದ್ಯುಚ್ಛಕ್ತಿ ಕೆಲಸ ನಿರ್ವಹಿಸಿರುವ ಅನುಭವ ದೃಢೀಕರಣ ಪತ್ರ ಲಗತ್ತಿಸಿರಬೇಕು.
3. ಟೆಂಡರ್‌ಅನ್ನು ಸಲ್ಲಿಸುವಾಗ ಇ.ಎಂ.ಡಿ. ಹಣ ರೂ. 25,000.00 ಗಳಿಗೆ ಬ್ಯಾಂಕ್ ಡ್ರಾಫ್ಟ್‌ಗಳನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಸದಸ್ಯ ಕಾರ್ಯದರ್ಶಿಗಳು " ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನ" ಲಾಲ್‌ಬಾಗ್ ಬೆಂಗಳೂರು ಇವರಿಗೆ ಪಾವತಿಯಾಗುವಂತೆ ಪಡೆದು ಲಗತ್ತಿಸಿರಬೇಕು. ಹಾಗೂ ಟೆಂಡರ್ ತೆಗೆಯುವ ಮೊದಲು ಬ್ಯಾಂಕ್ ಡ್ರಾಫ್ಟ್‌ನ ಜೆರಾಕ್ಸ್ ಪ್ರತಿಯನ್ನು ತೋರಿಸಬೇಕು.
4. ಯಶಸ್ವಿ ಗುತ್ತಿಗೆದಾರರ ಠೇವಣಿ ಹಣವನ್ನು ಬಿಟ್ಟು ಮಿಕ್ಕ ಎಲ್ಲಾ ಟೆಂಡರ್‌ದಾರರ ಠೇವಣಿ ಹಣವನ್ನು ಟೆಂಡರ್ ತೆರೆಯಲಾದ ದಿನವೇ ಹಿಂದಿರುಗಿಸಲಾಗುತ್ತದೆ. ಯಶಸ್ವಿ ಗುತ್ತಿಗೆದಾರರ ಠೇವಣಿ ಹಣವನ್ನು ಮಾತ್ರ ಗುತ್ತಿಗೆ ಅವಧಿ ಮುಗಿದ ಮೇಲೆ ಸಂಬಂಧಿಸಿದ ವಿಭಾಗಾಧಿಕಾರಿಗಳ ತೃಪ್ತಿಕರ ನಿರ್ವಹಣೆಯ ದೃಢೀಕರಣ ಪತ್ರ ಪಡೆದ ನಂತರ ಹಿಂದಿರುಗಿಸಲಾಗುತ್ತದೆ.

5. ಯಶಸ್ವಿ ಗುತ್ತಿಗೆದಾರರು ಗುತ್ತಿಗೆ ಕೆಲಸವನ್ನು ನಿರ್ವಹಿಸುವ ಮೊದಲು ಟೆಂಡರ್ ಷರತ್ತುಗಳಿಗೆ ಹಾಗೂ ನಿಭಂದನೆಗಳಿಗೆ ಪೂರ್ಣವಾಗಿ ಬದ್ದರಾಗಿರುತ್ತೇನೆ. ಎಂದು ರೂ. 200.00 ಗಳ ಛಾಪಾ ಕಾಗದದ ಮೇಲೆ ಕರಾರನ್ನು ಬರೆದು ನೋಟರಿ ಮಾಡಿಸಿ ಈ ಕಛೇರಿಗೆ ಸಲ್ಲಿಸಬೇಕು.
6. ಈ ಕಛೇರಿಯಿಂದ ನೀಡಲಾದ ನಿಗಧಿತ ಟೆಂಡರ್ ನಮೂನೆಯಲ್ಲಿ ಸಲ್ಲಿಸಿದ ಟೆಂಡರ್‌ಗಳನ್ನು ಮಾತ್ರ ಅಂಗೀಕರಿಸಲಾಗುವುದು ಹಾಗೂ ಅವಧಿ ಮೀರಿದ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.
7. ಗುತ್ತಿಗೆ ಕೆಲಸಕ್ಕೆ ಪ್ರತಿ ಮಾಹೆಯಲ್ಲಿ ನಿರ್ವಹಣೆ ಮಾಡಿದ ಕೆಲಸ ತೃಪ್ತಿಕರವಾಗಿರುವ ಬಗ್ಗೆ ಸಂಬಂಧಿಸಿದ ಅಧಿಕಾರಿಗಳ ದೃಢೀಕರಣ ಪಡೆದ ನಂತರ ಹಣ ಪಾವತಿಸಲು ಕ್ರಮ ಕೈಗೊಳ್ಳಲಾಗುತ್ತದೆ. ಹಣ ಪಾವತಿಸುವಾಗ ನಿಯಮದಂತೆ ಅನ್ವಯವಾಗುವ ತೆರಿಗೆಗಳನ್ನು ಬಿಲ್ಲಿನ ಮೂಲದಲ್ಲಿ ಕಡಿತಗೊಳಿಸಲಾಗುವುದು ಠೇವಣಿ ಹಣಕ್ಕೆ ಯಾವುದೇ ಬಡ್ಡಿ ನೀಡುವುದಿಲ್ಲ ಹಾಗೂ ಈ ಸಂಬಂಧ ಇಲಾಖೆಗೆ ನೀಡಿದ ಬ್ಯಾಂಕ್ ಡ್ರಾಫ್ಟ್‌ನ್ನು ಆರು ತಿಂಗಳ ನಂತರ ಅವಧಿಯಲ್ಲಿ ಗುತ್ತಿಗೆದಾರರ ಖರ್ಚಿನಿಂದ ನವೀಕರಣ ಮಾಡಿಸಿಕೊಡಬೇಕು.
8. ಪಾಲುದಾರ ಸಂಸ್ಥೆಯಿಂದ ಟೆಂಡರ್ ಸಲ್ಲಿಸಿದ್ದಲ್ಲಿ ಪಾಲುದಾರಿಕೆ ಬಗ್ಗೆ ಟೆಂಡರ್ ಸಲ್ಲಿಸುವ ಮೊದಲೇ ನೊಂದಾಣಿ ಮಾಡಿಸಿರುವ ಪ್ರತಿ ಲಗತ್ತಿಸಿರಬೇಕು.
9. ಗುತ್ತಿಗೆ ಕೆಲಸವನ್ನು ಸರಿಯಾಗಿ ನಿರ್ವಹಿಸದೆ ಇದ್ದ ಪಕ್ಷದಲ್ಲಿ ಮೊದಲ ಭಾರಿಗೆ ಶೇ. 10 ಎರಡನೇ ಭಾರಿಗೆ ಶೇ. 20 ಹಾಗೂ ಮೂರನೇ ಭಾರಿಗೆ ಶೇ. 30 ಒಟ್ಟು ಅನುಮೋದಿತ ವೆಚ್ಚದಲ್ಲಿ ದಂಡ ವಿಧಿಸಲಾಗುವುದು. (ಸದರಿ ಮೊಬಲಗನ್ನು ತೋಟಗಾರಿಕೆ ಉಪ ನಿರ್ದೇಶಕರವರು ನಿರ್ಧರಿಸಿಕೊಳ್ಳುವುದು) ಇಷ್ಟಾಗಿಯೂ ಕೆಲಸ ಸಮರ್ಪಕವಾಗಿಲ್ಲದಿದ್ದಲ್ಲಿ ಗುತ್ತಿಗೆಯನ್ನು ರದ್ದುಪಡಿಸಿ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಅಂತಹ ಸಂಸ್ಥೆ/ವ್ಯಕ್ತಿಯನ್ನು ಕಪ್ಪುಪಟ್ಟಿಗೆ ಸೇರಿಸಲು ಕ್ರಮ ವಹಿಸಲಾಗುವುದು.
10. ವಾರ್ಷಿಕ ಗುತ್ತಿಗೆ ಅವಧಿಯಲ್ಲಿ ನಿರ್ವಹಿಸಬೇಕಾದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಹಾಗೂ ಸಮರ್ಪಕವಾಗಿ ನಿರ್ವಹಿಸದೇ ಇದ್ದಲ್ಲಿ ಯಾವುದೇ ಕಾರಣ ನೀಡದೇ ಗುತ್ತಿಗೆಯನ್ನು ರದ್ದುಪಡಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರಲ್ಲಿ ಕಾಯ್ದಿರಿಸಲಾಗಿದೆ.

ಈ ಮೇಲಿನ ಯಾವುದೇ ಷರತ್ತುಗಳನ್ನು ಪೂರೈಸದ ಟೆಂಡರ್‌ಗಳನ್ನು ಕಾರಣ ನೀಡದೆ ತಿರಸ್ಕರಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರು ಹೊಂದಿರುತ್ತಾರೆ.

ಹೆಚ್ಚಿನ ವಿವರಗಳನ್ನು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್‌ಉದ್ಯಾನವನ, ಬೆಂಗಳೂರು ಇವರ ಕಛೇರಿಯಲ್ಲಿ ಸಂಪರ್ಕಿಸಿ ಪಡೆಯಬಹುದು.

ತೋಟಗಾರಿಕೆ ಉಪ ನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು.

ಪಿ.ಆರ್. 612

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು**

**ಟೆಂಡರ್ ಪ್ರಕಟಣೆ**

**ಸಂಖ್ಯೆ:ತೋಉನಿ/ಕಉ/ವಿನಿ2/97/2008–09, ದಿನಾಂಕ: 27ನೇ ನವೆಂಬರ್ 2008.**

**ವಿಷಯ:** ಕಬ್ಬನ್‌ಉದ್ಯಾನವನದ ರಸ್ತೆಗಳಲ್ಲಿ ಕಸ ಕಡ್ಡಿ ಹಾಗೂ ಮರದ ಕೆಳಗೆ ಬಿದ್ದಿರುವ ಎಲೆಗಳು ಹಾಗೂ ಪ್ಲಾಸ್ಟಿಕ್ ಚೀಲ ಇತ್ಯಾದಿ ತ್ಯಾಜ್ಯ ವಸ್ತುಗಳನ್ನು ಗುಡಿಸಿ ಸ್ವಚ್ಛ ಮಾಡುವ ಬಗ್ಗೆ.

ಕಬ್ಬನ್ ಉದ್ಯಾನವನ ಹಾಗೂ ಸುತ್ತ ಮುತ್ತಲಿನ ರಸ್ತೆಗಳನ್ನು ಗುತ್ತಿಗೆ ಆಧಾರದ ಮೇಲೆ ಕಸ ಗುಡಿಸಿ ಸ್ವಚ್ಛತೆ ಮಾಡಿಸಲು 2008–09 ನೇ ಸಾಲಿಗೆ ಟೆಂಡರ್‌ನ್ನು ಆಹ್ವಾನಿಸಲಾಗಿದೆ. ಇಚ್ಛಿಸುವವರು ಪ್ರತಿ ಮಾಹೆಗೆ ತಗಲುವ ವೆಚ್ಚ ಧರ ಸೂಚಿಸಲು ತಿಳಿಸಿದೆ.

| **ವಿವರಗಳು** | **ವಿಸ್ತೀರ್ಣ** | **ಮಾಹೆಯಾನ** |
|---|---|---|
| ಕಬ್ಬನ್ ಉದ್ಯಾನವನದಲ್ಲಿ ಬರುವ ರಸ್ತೆಗಳು ಅನುಬಂಧ–1 ರಲ್ಲಿ ತಿಳಿಸಿರುವ ವಿವರಗಳಂತೆ ಕಸ ಕಡ್ಡಿಗಳನ್ನು ಪ್ಲಾಸ್ಟಿಕ್ ಚೀಲ ಇತರೆ ತ್ಯಾಜ್ಯ ವಸ್ತುಗಳನ್ನು ಗುಡಿಸಿ ಸ್ವಚ್ಛ ಮಾಡುವುದು. ಸಿದ್ದಲಿಂಗಯ್ಯ ಸರ್ಕಲ್, ಸೆಂಟ್ರಲ್ ಲೈಬ್ರರಿ ಸರ್ಕಲ್, ಗೋಪಾಲಗೌಡ ಸರ್ಕಲ್, ಸೆಂಚುರಿ ಕ್ಲಬ್ ಹತ್ತಿರ ಎಲೆ ಕಸ ಪ್ಲಾಸ್ಟಿಕ್ ಚೀಲ ಇತರೆ ತ್ಯಾಜ್ಯ ವಸ್ತುಗಳನ್ನು ಗುಡಿಸಿ ತೆಗೆಸುವುದು. | ಅನುಬಂಧ – 1 ರಲ್ಲಿ ನಮೂದಿಸಿದಂತೆ | |

1. ಟೆಂಡರ್ ಫಾರಂಗಳನ್ನು ಪಡೆಯುವ ದಿನಾಂಕ : 16.12.2008 ರಿಂದ 18.12.2008 ರ ಸಂಜೆ 5.00 ಗಂಟೆಯವರೆಗೆ

2. ಮೊಹರಾದ ಟೆಂಡರ್‌ಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ : 19.12.2008 ಸಂಜೆ 4.00 ಗಂಟೆಯವರೆಗೆ

3. ಟೆಂಡರ್‌ಗಳನ್ನು ತೆರೆಯುವ ದಿನಾಂಕ : 19.12.2008 ಸಂಜೆ 5.00 ಗಂಟೆಗೆ

4. ಟೆಂಡರ್ ಫಾರಂ ಬೆಲೆ : ರೂ. 500–00 (ಐದು ನೂರು ಮಾತ್ರ)

ಹೆಚ್ಚಿನ ಮಾಹಿತಿಗಳನ್ನು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ ಬೆಂಗಳೂರು ರವರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದು.

ತೋಟಗಾರಿಕೆ ಉಪ ನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು.

**ನಿಭಂದನೆ ಮತ್ತು ಷರತ್ತುಗಳು:–**

1 ಟೆಂಡರ್ ಫಾರಂನ್ನು ದಿನಾಂಕ:16.12.2008 ರಿಂದ 18.12.2008 ರವರೆಗೆ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು. ಟೆಂಡರ್ ಫಾರಂ ಬೆಲೆ ರೂ. 500=00

2 ಟೆಂಡರ್ ಜೊತೆಯಲ್ಲಿ ರೂ. 50,000=00 ಗಳ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಬೇಕು. ಡಿಮ್ಯಾಂಡ್ ಡ್ರಾಫ್ಟ್‌ನ್ನು ಸದಸ್ಯ ಕಾರ್ಯದರ್ಶಿಗಳು, "ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನ" ಲಾಲ್‌ಬಾಗ್ ಬೆಂಗಳೂರು ರವರಿಗೆ ಪಾವತಿಯಾಗುವಂತೆ ಬೆಂಗಳೂರಿನ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದಿರಬೇಕು.

3 ಮೊಹರಾದ ಟೆಂಡರ್‌ಗಳನ್ನು ದಿನಾಂಕ:19.12.2008 ರಂದು ಸಂಜೆ 4.00 ಗಂಟೆಯವೆರಗೆ ಸ್ವೀಕರಿಸಲಾಗುವುದು ನಿಗದಿಯಾದ ವೇಳೆಯ ನಂತರ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

4 ಮೊಹರಾದ ಟೆಂಡರ್ ಗಳನ್ನು ದಿನಾಂಕ: 19.12.2008 ರಂದು ಸಂಜೆ 5.00 ಗಂಟೆಗೆ ಕೆಳಸಹಿದಾರರ ಕಛೇರಿಯಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಮತ್ತು ಸ್ವೀಕರಿಸುವ ಪೂರ್ಣ ಅಧಿಕಾರವು ತೋಟಗಾರಿಕೆ ನಿರ್ದೇಶಕರದೇ ಅಂತಿಮವಾಗಿರುತ್ತದೆ. ಹೆಚ್ಚಿನ ವಿವರಗಳನ್ನು ಕಛೇರಿ ವೇಳೆಯಲ್ಲಿ ಪಡೆಯಬಹುದು.

5 ಟೆಂಡರ್‌ಗಳನ್ನು ಕೊಡುವಾಗ ಸೀಲ್ ಮಾಡಿರಬೇಕು ಮತ್ತು ಲಕೋಟೆಯ ಮೇಲೆ ಕಬ್ಬನ್ ಉದ್ಯಾನವನದ ರಸ್ತೆಗಳನ್ನು ಗುತ್ತಿಗೆ ಆಧಾರದ ಮೇಲೆ ಸ್ವಚ್ಛತೆ ಮಾಡಿಸುವ ಬಗ್ಗೆ ಟೆಂಡರ್ ಎಂದು ಬರೆದಿರಬೇಕು.

6 ಟೆಂಡರ್ ಜೊತೆಯಲ್ಲಿ ಠೇವಣಿ ಹಣ ರೂ. 50,000=00 ಗಳ ಡಿ.ಡಿ. ಇಲ್ಲದಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

7 ಕಬ್ಬನ್ ಉದ್ಯಾನವನದ ಒಳಗಡೆ (ಅನುಬಂಧ–1 ರಲ್ಲಿ ಲಗತ್ತಿಸಿದ ವಿವರಂದ ರೀತಿ) ಇರುವ ರಸ್ತೆಗಳನ್ನು ಪ್ರತಿನಿತ್ಯ ಹೊರ ಮತ್ತು ಒಳಗೆ ಸ್ವಚ್ಛವಾಗಿ ಗುಡಿಸಬೇಕು ಇದಕ್ಕೆ 20 ಜನ ಕೆಲಸಗಾರರನ್ನು ನೇಮಕಾತಿ ಮಾಡಿ, ನೇಮಕಾತಿ ಮಾಡಿದ ವಿವರಗಳನ್ನು ಸಂಬಂಧಿಸಿದ ಗುತ್ತಿಗೆದಾರರು ಸಹಾಯಕ ತೋಟಗಾರಿಕೆ ಅಧಿಕಾರಿ, ಕಬ್ಬನ್‌ಉದ್ಯಾನವನ ಹಾಗೂ ಶೇಷಾದ್ರಿ ವಿಭಾಗರವರ ಪರಿಶೀಲನೆಗೆ ಒದಗಿಸಬೇಕು. ಹಾಗೂ ಅವರಿಂದ ಪ್ರತಿ ತಿಂಗಳು ತೃಪ್ತಿಕರಣ ದೃಢೀಕರಣ ಪಡೆಯತಕ್ಕದ್ದು.

8 ಕಬ್ಬನ್‌ಉದ್ಯಾನವನದಲ್ಲಿ ಬರುವ ಸಿದ್ದಲಿಂಗಯ್ಯ ಸರ್ಕಲ್, ಸೆಂಟ್ರಲ್ ಲೈಬ್ರರಿ ಸರ್ಕಲ್, ಗೋಪಾಲಗೌಡ ಸರ್ಕಲ್, ಸಂಚುರಿ ಕ್ಲಬ್ ಹತ್ತಿರ ಹಾಗೂ ಅನುಬಂಧ–1 ರಲ್ಲಿ ವಿವರಿಸಿದ ರಸ್ತೆಗಳಲ್ಲಿ ಸ್ವಚ್ಛತೆ ಹಾಗೂ ಮರದ ಕೆಳಗೆ ಹಾಗೂ ಹುಲ್ಲುಹಾಸಿನ ಮೇಲೆ ಬಿದ್ದಿರುವ ಕಸ ಕಡ್ಡಿಗಳನ್ನು ನಿಗದಿಪಡಿಸಿದ ಕಾಂಪೋಸ್ಟ್ ಗುಂಡಿಗೆ ಸಾಗಿಸಬೇಕು. ಹಾಗೂ ಪ್ಲಾಸ್ಟಿಕ್ ಚೀಲ ಇತರೆ ತ್ಯಾಜ್ಯ ವಸ್ತುಗಳನ್ನು ಸ್ವಂತ ವಾಹನದಲ್ಲಿ ದೂರ ಸಾಗಿಸಬೇಕು.

9 ಈ ಗುತ್ತಿಗೆ ಕೆಲಸವನ್ನು ನಿರ್ವಹಿಸಿದ 2 ವರ್ಷದ ಅವಧಿಗೆ ದೃಢೀಕರಣ ಪತ್ರವನ್ನು ನೀಡಬೇಕು.

10 ಟೆಂಡರ್‌ದಾರರು ಟ್ರಿಪರ್ ಲಾರಿ ಅಥವಾ ಟ್ರ್ಯಾಕ್ಟರ್ ಹೊಂದಿರತಕ್ಕದ್ದು ಮತ್ತು ವಾಹನದ ದಾಖಲೆಗಳ ಜೆರಾಕ್ಸ್ ಪ್ರತಿಗಳನ್ನು ಟೆಂಡರ್ ಜೊತೆಯಲ್ಲಿ ಲಗತ್ತಿಸಬೇಕು.

11 ಕಳೆದ ಸಾಲಿನ ಅಧಾಯದ ದೃಢೀಕರಣ ಪತ್ರವನ್ನು ಲಗತ್ತಿಸಬೇಕು.

12 ಕನಿಷ್ಠ 5.00 ಲಕ್ಷಗಳ ಬ್ಯಾಂಕ್ ಸಾಲ್ವೆನ್ಸಿ ಲಗತ್ತಿಸಿರಬೇಕು,

13 ಯಶಸ್ವಿ ಟೆಂಡರ್‌ದಾರರು ವಾರ್ಷಿಕ ಗುತ್ತಿಗೆ ಕೆಲಸವನ್ನು ನಿರ್ವಹಿಸಲು ನಮೂದಿಸಿದ ಟೆಂಡರ್ ಮೊತ್ತವನ್ನು 12 ಸಮ ಕಂತುಗಳಲ್ಲಿ ಪ್ರತಿ ತಿಂಗಳು ಕೆಲಸ ತೃಪ್ತಿಕರವಾಗಿ ನಿರ್ವಹಿಸಿದ ನಂತರ ಹಣ ಪಾವತಿಗೆ ಕ್ರಮ ಜರುಗಿಸಲಾಗುವುದು ಹಾಗೂ ನಿಯಮದಂತೆ ಸಾಲದ ಬಿಲ್ಲಿನಲ್ಲಿ ಅನ್ವಯವಾಗುವ ತೆರಿಗೆಗಳನ್ನು ಕಟಾಯಿಸಲಾಗುವುದು.

14 ಯಶಸ್ವಿ ಟೆಂಡರ್‌ದಾರರು ಗುತ್ತಿಗೆ ಬಗ್ಗೆ ಷರತ್ತು ಮತ್ತು ನಿಭಂದನೆಗಳನ್ನು ಒಪ್ಪಿರುವ ಬಗ್ಗೆ ರೂ. 200=00 ಛಾಪಾ ಕಾಗದದ ಮೇಲೆ ಕರಾರು ಬರೆದು ಕೊಡಬೇಕು.

